ನೆಹರೂ ಬಾಲ ಪುಸ್ತಕಾಲಯ

# ಅಂಚೆ ಸ್ಟಾಂಪುಗಳ ರಂಜಕ ಕಥೆ

ಎಸ್. ಪಿ. ಚಟರ್ಜಿ

ಅನುವಾದ

ಹೆಚ್. ಕೆ. ರಾಮಕೃಷ್ಣ



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

ಮೊದಲ ಮುದ್ರಣ : 1974 (ಶಕ 1896)
ಪುನರ್ ಮುದ್ರಣ : 1990 (ಶಕ 1911)



Romance of Postage Stamps *(Kannada)*

ಬೆಲೆ : ರೂ. 5-00

ನಿರ್ದೇಶಕರು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ,
ಎ–5, ಗ್ರೀನ್ ಪಾರ್ಕ್, ಹೊಸದಿಹಲಿ–110016,
ಇವರಿಂದ ಪ್ರಕಟಿತ.




# ಅಂಚೆ ಸ್ಟ್ಯಾಂಪುಗಳ ರಂಜಕ ಕಥೆ

1965ನೇ ಇಸವಿಯ ಜನವರಿ 26ನೇ ತಾರೀಖಿನ ಸಂಜೆ. ಹೊಳಪಾದ ಕೆಂಪು ವರ್ಣದ ಬೋಯಿಂಗ್–707 ವಿಮಾನವೊಂದು ನ್ಯೂಯಾರ್ಕಿನಿಂದ ಲಂಡನ್ನಿನ ವಿಮಾನ ನಿಲ್ದಾಣದಲ್ಲಿ ಬಂದಿಳಿಯಿತು. ಪತ್ರಿಕಾ ವರದಿಗಾರರು, ಛಾಯಾಚಿತ್ರಕಾರರು ಹಾಗೂ ಇತರ ವ್ಯಕ್ತಿಗಳ ದೊಡ್ಡ ಗುಂಪೊಂದು ವಿಮಾನದ ಸುತ್ತ ಸಂಭ್ರಮದೊಡನೆ ಸೇರಿತ್ತು. 'ಒಂದು–ಸೆಂಟ್' ಮೌಲ್ಯದ ಬ್ರಿಟಿಷ್ ಗಯಾನಾದ ಅಂಚೆ ಸ್ಟ್ಯಾಂಪಿನೊಡನೆ, ಶ್ರೀ ಫಿನ್‌ಬರ್ ಕೆನ್ನಿ ಎಂಬುವರು ವಿಮಾನದಿಂದ ಕೆಳಗಿಳಿದರು. ಈ 'ಒಂದು–ಸೆಂಟ್' ಸ್ಟ್ಯಾಂಪನ್ನು 200,000 ಪೌಂಡ್‌ಗಳಿಗೆ (ರೂ..36,00,000) ವಿಮೆ ಮಾಡಲಾಗಿತ್ತು. ಲಂಡನ್ನಿನ ಸ್ಟ್ಯಾನ್ಲೆ ಗಿಬ್ಬನ್ಸ್ ಕ್ಯಾಟಲಾಗ್ ಸೆಂಟೆನರಿ ಎಗ್ಸಿಬಿಷನ್‌ನಲ್ಲಿ ಪ್ರದರ್ಶಿಸುವ ಸಲುವಾಗಿ 'ಅಂಗರಕ್ಷಕ'ರೊಡನೆ ಈ ಸ್ಟ್ಯಾಂಪನ್ನು ವಿಶೇಷವಾಗಿ ತರಲಾಗಿತ್ತು.

ಅತ್ಯಮೂಲ್ಯವೆನಿಸಿದ ಈ ಕಾಗದದ ಚೂರು, ಮಾರನೆಯ ದಿನ ಬೆಳಗ್ಗೆ ಎಲ್ಲರ ಮಾತಿನ ಮುಖ್ಯ ವಿಷಯವಾಗಿತ್ತು. ಎಲ್ಲ ವೃತ್ತಪತ್ರಿಕೆಗಳೂ ಈ ಸ್ಟ್ಯಾಂಪಿನ ಬಗ್ಗೆ ದಪ್ಪ ಅಕ್ಷರಗಳಲ್ಲಿ ವರದಿಮಾಡಿದ್ದವು. ಬಿ.ಬಿ.ಸಿ. ಕೇಂದ್ರವು ವಿಶೇಷ ಕಾರ್ಯಕ್ರಮವನ್ನೇ ಪ್ರಸಾರ ಮಾಡಿತ್ತು. ಕಪ್ಪು ಮತ್ತು ಉಜ್ವಲ ಕಡು ಕೆಂಪು ವರ್ಣಗಳಿಂದ ಕೂಡಿದ ಹಳೆಯದಾದ ಈ ಕಾಗದದ ಚೂರಿನ ಅಸಾಧಾರಣ ಅಂಶವಾದರೂ ಏನು? ಈ ಸ್ಟ್ಯಾಂಪಿನ ಕಥೆ ಹೆಚ್ಚು ಆಸಕ್ತಿಯುತವಾಗಿದೆ.

ಹಿಂದೆ, ಬ್ರಿಟಿಷ್ ಗಯಾನಾದ ಸ್ಟ್ಯಾಂಪುಗಳನ್ನು ಬ್ರಿಟಿಷ್ ಮುದ್ರಣಕಾರರಾದ ವಾಟರ್‌-ಲೂ ಆ್ಯಂಡ್ ಸಂನ್ಸ್, ಛಾಪಿಸುತ್ತಿದ್ದರು. 1856ರಲ್ಲಿ ಸ್ಟ್ಯಾಂಪುಗಳ ದಾಸ್ತಾನು ಮುಗಿದು ಹೋಯಿತು. ಆದರೆ ಹೊಸ ಸರಬರಾಜು ಇನ್ನೂ ಬಂದಿರಲಿಲ್ಲ. ಆದ್ದರಿಂದ ಪೋಸ್ಟ್ ಮಾಸ್ಟರನು ಆತುರಾತುರವಾಗಿ 4–ಸೆಂಟ್‌ಗಳ ಸ್ಟ್ಯಾಂಪುಗಳನ್ನು ಸ್ಥಳೀಯವಾಗಿಯೇ ಮುದ್ರಿಸಿದನು. ಆಗ ಅಸ್ತಿತ್ವದಲ್ಲಿದ್ದ ವಿನ್ಯಾಸವನ್ನೂ ಮತ್ತು ವಸಾಹತಿನ ಮುದ್ರೆಯನ್ನೂ—ಅಂದರೆ, ಒಂದು ಹಡಗು ಮತ್ತು 'ದಾಮು ಪೆಟಿಮ್ಯುಸ್ಕ್ ವಿಕಿಸ್ ಸಿಮ್' (ನಾವು ನೀಡುತ್ತೇವೆ ಮತ್ತು ಪ್ರತಿಯಾಗಿ ಅರಸುತ್ತೇವೆ) ಎಂಬ ಸೂಕ್ತಿಯನ್ನೂ–ಬಳಸಿಕೊಂಡು ಅವನು ಈ ಸ್ಟ್ಯಾಂಪನ್ನು ಮುದ್ರಿಸಿದನು. ಕಡುಗೆಂಪು ವರ್ಣದ ಕಾಗದದ ಮೇಲೆ ಕಪ್ಪು ಮಸಿಯಲ್ಲಿ ಸ್ಟ್ಯಾಂಪನ್ನು ಮುದ್ರಿಸಲಾಗಿತ್ತು. ಉತ್ತಮ ಕಾಗದವನ್ನು ಬಳಸಿರಲಿಲ್ಲ. ಸ್ಟ್ಯಾಂಪಿನ ಖೋಟಾ ತಯಾರಿಕೆಯನ್ನು ತಪ್ಪಿಸುವ ಸಲುವಾಗಿ, ಮಾರಾಟಮಾಡುವ ಮುನ್ನ ಪ್ರತಿ ಸ್ಟ್ಯಾಂಪಿನ ಮೇಲೂ ಹಸ್ತಾಕ್ಷರ ಹಾಕುವಂತೆ ಪೋಸ್ಟ್‌ಮಾಸ್ಟರನು ಅಂಚೆ ಅಧಿಕಾರಿಗಳಿಗೆ ಸೂಚಿಸಿದ.




ಹದಿನೇಳು ವರ್ಷಗಳ ನಂತರ, ಎಲ್. ವೆರ್‌ನೊನ್ ವಾಘ್ನನ್ ಎಂಬ ಬ್ರಿಟಿಷ್ ಗಯಾನಾದ ಯುವಕ ಸ್ಟ್ಯಾಂಪ್ ಸಂಗ್ರಹಕಾರನೊಬ್ಬನು, ತನ್ನ ಕುಟುಂಬದ ಪತ್ರಗಳ ಪೈಕಿ ಒಂದರಲ್ಲಿ 'ಒಂದು–ಸೆಂಟಿನ' ಸ್ಟ್ಯಾಂಪಿನ ಮೇಲೆ ಇ. ಡಿ. ವೈಟ್ ಎಂಬುವರ ಹಸ್ತಾಕ್ಷರವಿರುವುದನ್ನು ಗಮನಿಸಿದ. 4–ಸೆಂಟ್ ಸ್ಟ್ಯಾಂಪುಗಳ ಪೈಕಿ ಒಂದನ್ನು ತಪ್ಪಿನಿಂದ 'ಒಂದು–ಸೆಂಟ್' ಎಂದು ಮುದ್ರಿಸಿದ್ದಾಗಲೀ, ಈ ಸ್ಟ್ಯಾಂಪು ತನ್ನಲ್ಲಿ ಸೇರಿದೆಯೆಂಬುದಾಗಲೀ ಆಗ ಅವನಿಗೆ ಗೊತ್ತಾಗಲಿಲ್ಲ. ಅವನು ಆ ಸ್ಟ್ಯಾಂಪನ್ನು ನೀರಿನಲ್ಲಿ ಅದ್ದಿ, ತನ್ನ ಆಲ್ಬಮ್‌ನಲ್ಲಿ ಇತರ ಸ್ಟ್ಯಾಂಪುಗಳ ಜೊತೆಯಲ್ಲಿ ಅಂಟಿಸಿದ. ಎಂಟು ಮೂಲೆಗಳಲ್ಲಿ ಕತ್ತರಿಸಿದ್ದ ಆ ಸ್ಟ್ಯಾಂಪು ಸಾಕಷ್ಟು ಹೊಲಸಾಗಿತ್ತು. ವಾಘ್ನನ್ ಈ ಸ್ಟ್ಯಾಂಪನ್ನು ಮಾರಿ ಹೆಚ್ಚು ಆಕರ್ಷಕವಾದ ವಿದೇಶೀ ಸ್ಟ್ಯಾಂಪುಗಳನ್ನು ಕೊಳ್ಳಲು ನಿರ್ಧರಿಸಿದ.




ಸ್ಥಳೀಯ ಸಂಗ್ರಹಕಾರ ಎನ್. ಆರ್. ಮೆಕಿನ್ನನ್ ಎಂಬುವನ ಮನವೊಲಿಸಿ. 6 ಷಿಲ್ಲಿಂಗ್‌ಗಳಿಗೆ (ರೂ. 5–40) ಅದನ್ನು ಅವನಿಗೆ ಮಾರಿದ. ಈ ಅಲ್ಪ ಹಣಕ್ಕೆ ಮಾರಾಟವಾದ ಸ್ಟಾಂಪ್, ಒಂದುದಿನ ಅತ್ಯಮೂಲ್ಯವಾಗುವುದೆಂಬ ಅಂಶ, ಅವನಿಗೆ ಕನಸಿನಲ್ಲೂ ಬರಲಿಲ್ಲ !

ಐದು ವರ್ಷಗಳ ನಂತರ, ಲಿವರ್‌ಪೂಲಿನ ಥಾಮಸ್ ರಿಡ್‌ಪಾತ್ ಎಂಬುವನು 120 ಪೌಂಡ್‌ಗಳಿಗೆ (ರೂ. 2,160) ಅದನ್ನು ಕೊಂಡ. ಅದೇ ವರ್ಷ ಅವನು ಫ್ರಾನ್ಸಿನ ಖ್ಯಾತ ಸ್ಟಾಂಪ್ ಸಂಗ್ರಹಕಾರ ಫಿಲಿಪ್ ಲಾ ರೆನೊಟೆರಿ ವಾನ್ ಫೆರೆ ಎಂಬುವನಿಗೆ 150 ಪೌಂಡ್‌ಗಳಿಗೆ (ರೂ. 2,700) ಅದನ್ನು ಮಾರಿದ. ಈ ಸ್ಟಾಂಪಿನ ಅಪರೂಪ ಅಂಶದ ಬಗ್ಗೆ ಸುದ್ದಿ ಹರಡಿತು. 1917ರಲ್ಲಿ ಫೆರೆ ಮೃತಪಟ್ಟ ನಂತರ, ಅವನ ಸ್ಟಾಂಪ್‌ಗಳ ಸಂಗ್ರಹಣೆಯನ್ನು 1921ರಿಂದ 1925ರ ನಡುವೆ ಪ್ಯಾರಿಸ್‌ನಲ್ಲಿ ಹರಾಜಿನ ಮೂಲಕ ಮಾರಾಟಮಾಡಲಾಯಿತು. 1922ರಲ್ಲಿ, ಇಂತಹ ಒಂದು ಮಾರಾಟದಲ್ಲಿ ಬ್ರಿಟಿಷ್ ಗಯಾನಾದ ಈ 'ಒಂದು–ಸೆಂಟ್'ನ ಸ್ಟಾಂಪನ್ನು ಅಮೆರಿಕದ ಆರ್ಥರ್ ಹಿಂದ್ ಎಂಬುವನು 7,343 ಪೌಂಡ್‌ಗಳಿಗೆ (ರೂ. 1,32,000) ಕೊಂಡನು.

1933ರಲ್ಲಿ ಆರ್ಥರ್ ಹಿಂದ್ ಮೃತಪಟ್ಟನು ಮತ್ತು ತನ್ನ ಸ್ಟಾಂಪುಗಳ ಸಂಗ್ರಹವನ್ನು ತನ್ನ ಆಸ್ತಿಯ ಒಂದು ಭಾಗವಾಗಿ ಇಟ್ಟಿದ್ದನು. ಆದರೆ ಈ 'ಒಂದು–ಸೆಂಟ್'ನ ಸ್ಟಾಂಪನ್ನು ತನ್ನ ಪತಿ ತನಗೆ ಕೊಟ್ಟಿದ್ದನೆಂದು ಅವನ ಪತ್ನಿ ಹೇಳಿಕೊಂಡಳು. ಈ ಬಗ್ಗೆ ನಡೆದ ಮೊಕದ್ದಮೆಯಲ್ಲಿ ಅವಳು ಜಯ ಗಳಿಸಿದಳು. 1940ರಲ್ಲಿ 40,000 ಡಾಲರ್‌ಗಳಿಗೆ (ರೂ. 3,00,000) ಆಸ್ಟ್ರೇಲಿಯದ ಸ್ಟಾಂಪ್ ಸಂಗ್ರಹಕಾರನೊಬ್ಬನು ಈ ಸ್ಟಾಂಪನ್ನು ಕೊಂಡನು. ಆತನು ತನ್ನ ಹೆಸರನ್ನು ಬಹಿರಂಗಪಡಿಸಲಿಲ್ಲ.

ಈ ಸ್ಟಾಂಪ್ ಈ ವ್ಯಕ್ತಿಯ ಬಳಿಯಲ್ಲಿದ್ದಾಗಲೇ ಶ್ರೀ ಕೆನ್ನಿ, ಗಿಬ್‌ಸನ್ ಪ್ರದರ್ಶನಕ್ಕಾಗಿ ಇದನ್ನು 1965ರಲ್ಲಿ ಲಂಡನ್ನಿಗೆ ತಂದನು. 1970ರಲ್ಲಿ ಈ ಸ್ಟಾಂಪನ್ನು ನ್ಯೂಯಾರ್ಕಿನಲ್ಲಿ ಮತ್ತೆ ಹರಾಜು ಹಾಕಲಾಯಿತು. ಹರಾಜು ಹಾಕಲ್ಪಟ್ಟ ಕೊಠಡಿ ಜನರಿಂದ ಕಿಕ್ಕಿರಿದು ತುಂಬಿತ್ತು. ಹರಾಜಿನ ಬಿಸಿ ಏರಿ, ಸ್ಟಾಂಪಿನ ಮೌಲ್ಯ ತ್ವರಿತವಾಗಿ ಹೆಚ್ಚಿದಂತೆ, ಅಲ್ಲಿ ಸೇರಿದ್ದ ಜನರಲ್ಲಿ ಕುತೂಹಲ ಮತ್ತು ದಿಗ್ಭ್ರಮೆ ಮೂಡಿತು. ಅಂತಿಮವಾಗಿ ಬ್ರಿಟಿಷ್ ಗಯಾನಾದ ಈ 'ಒಂದು–ಸೆಂಟ್‌ಸೆಂಟ್'ನ ಸ್ಟಾಂಪು 2,80,000 ಡಾಲರ್‌ಗಳಿಗೆ (ರೂ. 21,00,000) ಮಾರಾಟವಾಯಿತು.



ಇದು ವಿಶ್ವದ ಒಂದು ಅತ್ಯಂತ ಅಪರೂಪ ಸ್ಟಾಂಪೆಂದು ಪರಿಗಣಿಸಲಾಗಿದೆ. ಮುಂದೆ ಈ ಸ್ಟಾಂಪಿನ ಬೆಲೆ ಎಷ್ಟರ ಮಟ್ಟಿಗೆ ಏರಬಹುದೆಂಬುವನ್ನು ನೀವೇ ಊಹಿಸಿಕೊಳ್ಳಿ.

ವಿಶ್ವಪ್ರಖ್ಯಾತವಾದ ಮಾರಿಷಸ್‌ನ 'ಪೋಸ್ಟ್ ಆಫಿಸ್' ಸ್ಟಾಂಪುಗಳ ಕಥೆಯೂ ಇಷ್ಟೇ ಆಸಕ್ತಿಯುತವಾಗಿದೆ. ಹಿಂದೂ ಮಹಾಸಾಗರದಲ್ಲಿನ ಒಂದು ಸಣ್ಣ ದ್ವೀಪವಾದ ಮಾರಿಷಸ್, ಅಂಚೆ ಸ್ಟಾಂಪುಗಳನ್ನು ಹೊರಡಿಸುವಲ್ಲಿ ವಿಶ್ವದಲ್ಲೇ ಐದನೇ ದೇಶ. 1847ರಲ್ಲಿ 1 ಪೆನ್ನಿ ಮತ್ತು 2 ಪೆನ್ನಿ ಮೌಲ್ಯದ ಮಾರಿಷಸ್ ಸ್ಟಾಂಪುಗಳನ್ನು ಹೊರಡಿಸಲು ನಿರ್ಧರಿಸಲಾಯಿತು. ಮಾರಿಷಸ್‌ನ ಆಗಿನ ಗೌರ್ನರ್‌ನ ಪತ್ನಿ, ಲೇಡಿ ಗೋಮ್ ಎಂಬುವರು 1847ನೇ ಸೆಪ್ಟೆಂಬರ್ 30ರಂದು 'ವಿವಿಧ ವೇಷ' ಸ್ಪರ್ಧಾಕೂಟವನ್ನು ನಡೆಸಲು ನಿರ್ಧರಿಸಿದ್ದರು ಮತ್ತು ಮಾರಿಷಸ್‌ನ ಮೊದಲ ಅಂಚೆ ಸ್ಟಾಂಪುಗಳನ್ನು ತನ್ನ ಆಹ್ವಾನ ಪತ್ರದ ಮೇಲೆ ಅಂಟಿಸಲು ಅಪೇಕ್ಷಿಸಿದರು. ಸಮಯ ಕಡಿಮೆಯಿದ್ದುದರಿಂದ ಈ ಸ್ಟಾಂಪುಗಳನ್ನು ಸ್ಥಳೀಯವಾಗಿಯೇ ಛಾಪಿಸಲು ನಿರ್ಧರಿಸಲಾಯಿತು.

ಆ ಸಣ್ಣ ದ್ವೀಪದಲ್ಲಿ ಜೆ. ಬರ್ನಾರ್ಡ್ ಎಂಬ ವ್ಯಕ್ತಿಗೆ ಮಾತ್ರ ಲೋಹದ ಹಾಳೆಗಳ ಮೇಲೆ ರಚನೆಗಳನ್ನು ಕೆತ್ತುವ ಕಲೆ ತಿಳಿದಿತ್ತು. ಈ ಸ್ಟಾಂಪುಗಳಿಗಾಗಿ ವಿನ್ಯಾಸವನ್ನು ಕೆತ್ತುವಂತೆ ಅವನಿಗೆ ತಿಳಿಸಲಾಯಿತು. ವಿನ್ಯಾಸದ ರಚನೆಯ ವಿವರ ಹೀಗಿತ್ತು: ಮಧ್ಯದಲ್ಲಿ ರಾಣಿ ವಿಕ್ಟೋರಿಯಳ ತಲೆ; ಮೇಲ್ಭಾಗದಲ್ಲಿ 'ಪೋಸ್ಟೇಜ್' ಎಂಬ ಅಕ್ಷರಗಳು; ಕೆಳಭಾಗದಲ್ಲಿ ವ್ಯಾಲ್ಯೂ' ಎಂಬ ಅಕ್ಷರಗಳು; ಬಲಭಾಗದಲ್ಲಿ 'ಮಾರಿಷಸ್' ಎಂಬ ಪದ; ಮತ್ತು ಎಡಭಾಗದಲ್ಲಿ 'ಪೋಸ್ಟ್ ಪೇಡ್' ಎಂಬ ಪದಗಳು. 1 ಪೆನ್ನಿ ಮತ್ತು 2 ಪೆನ್ನಿ ಮೌಲ್ಯದ ಸ್ಟಾಂಪುಗಳನ್ನು ಆದಷ್ಟು ತ್ವರಿತವಾಗಿ ಛಾಪಿಸುವಂತೆ ಬರ್ನಾರ್ಡ್‌ಗೆ ತಿಳಿಸಲಾಯಿತು. ಅವನು ವಿನ್ಯಾಸವನ್ನು ಸಿದ್ಧಪಡಿಸಿ ಸ್ಟಾಂಪುಗಳನ್ನು ಮುದ್ರಿಸಿದನು ಆದರೆ ವಿನ್ಯಾಸದಲ್ಲಿ 'ಪೋಸ್ಟ್ ಪೇಡ್' ಎಂಬ ಅಕ್ಷರಗಳಿಗೆ ಬದಲಾಗಿ 'ಪೋಸ್ಟ್ ಆಫೀಸ್' ಎಂಬ ಅಕ್ಷರಗಳನ್ನು ತಪ್ಪಾಗಿ ಕೆತ್ತಿದ !

ಅದರ ಕಥೆ ಹೀಗಿದೆ: ಬರ್ನಾಡ್‌, 'ಮಾರಿಷಸ್', 'ಪೋಸ್ಟೇಜ್' ಮತ್ತು 'ವ್ಯಾಲ್ಯೂ ಎಂಬ ಪದಗಳನ್ನು ವಿನ್ಯಾಸದ ಮೇಲೆ ಕೆತ್ತಿದ ನಂತರ, ಪೋಸ್ಟ್ ಮಾಸ್ಟರ್ ಅವನಿಗೆ ಬರೆದು ಕೊಟ್ಟಿದ್ದ ಈ ಪದಗಳನ್ನೊಳಗೊಂಡ ಚೀಟಿ ಕಳೆದುಹೋಯಿತು. ವಿನ್ಯಾಸದ ಎಡಭಾಗದಲ್ಲಿ ಯಾವ ಪದಗಳನ್ನು ಕೆತ್ತಬೇಕೆಂಬುದು ಅವನ ನೆನಪಿಗೆ ಬರಲಿಲ್ಲ. ಈ ಬಗ್ಗೆ ಪೋಸ್ಟ್ ಮಾಸ್ಟರನ್ನೇ ಕೇಳಲು ಹೊರಟ. ಅಂಚೆ ಕಚೇರಿಯನ್ನು ಸಮೀಪಿಸುತ್ತಿದ್ದಂತೆ ಬರ್ನಾರ್ಡ್ ತಲೆ ಎತ್ತಿ ನೋಡಿದ. ಕಟ್ಟಡದ ಮೇಲೆ 'ಪೋಸ್ಟ್ ಆಫೀಸ್' ಎಂಬ ಹಲಗೆಯಿರುವುದನ್ನು ನೋಡಿದ. ತಾನು ಮರೆತಿದ್ದ ಪದಗಳು ಇವೇ ಎಂದುಕೊಂಡು, ತ್ವರಿತವಾಗಿ ಹಿಂದಿರುಗಿ, ವಿನ್ಯಾಸದ ಎಡ

ಪಾರ್ಶ್ವದಲ್ಲಿ 'ಪೋಸ್ಟ್ ಆಫೀಸ್' ಎಂಬ ಪದಗಳನ್ನು ಕೆತ್ತಿದ. ಹೀಗಾಗಿ 'ಪೋಸ್ಟ್ ಪೇಡ್' ಎಂಬ ಪದಗಳಿಗೆ ಬದಲು 'ಪೋಸ್ಟ್ ಆಫೀಸ್' ಎಂಬ ತಪ್ಪು ಪದಗಳೊಡನೆ ಸ್ಟಾಂಪ್‌ಗಳು ಮುದ್ರಿತವಾದುವು.

1847ನೇ ಸೆಪ್ಟೆಂಬರ್ 20ರಂದು ಈ ಸ್ಟಾಂಪುಗಳನ್ನು ಮಾರಾಟಕ್ಕೆ ಬಿಟ್ಟುಕೊಡಲಾಯಿತು. ಆದರೆ 1864ರ ವರೆಗೆ ಈ ತಪ್ಪು ಪತ್ತೆಯಾಗಲೇ ಇಲ್ಲ. ಬೊರ್ಡೊ ಎಂಬ ಸ್ಥಳದ ವ್ಯಾಪಾರಿಯೊಬ್ಬನ ಪತ್ನಿ, ಮ್ಯಾಡಮ್ ಬೊಖಾರ್ಟ್ ಎಂಬುವಳು ತನ್ನ ಪತಿಯ ಪತ್ರವ್ಯವಹಾರಗಳ ಪೈಕಿ 12ರ ಮೇಲೆ ಈ ಅಪರೂಪದ ಸ್ಟಾಂಪುಗಳಿರುವುದನ್ನು ಪತ್ತೆಹಚ್ಚಿದಳು. ಈಗ ಈ ರೀತಿಯ 26 ಸ್ಟಾಂಪುಗಳು ಇನ್ನೂ ಇರುವುದು ಗೊತ್ತಾಗಿದೆ. ಅವುಗಳಲ್ಲಿ 14, 1 ಪೆನ್ನಿಯ ಮತ್ತು 12, 2 ಪೆನ್ನಿಯ ಮೌಲ್ಯದ್ದಾಗಿವೆ. ಪ್ರತಿ ಸಲ ಈ ಸ್ಟಾಂಪುಗಳು ಹಸ್ತ ಬದಲಾಯಿಸಿದಾಗಲೆಲ್ಲಾ ಅವುಗಳ ಬೆಲೆಯೂ ಏರುತ್ತದೆ

1 ಪೆನ್ನಿ ಮೌಲ್ಯದ ಎರಡು ಸ್ಟಾಂಪುಗಳುಳ್ಳ ಲಕೋಟೆಯೊಂದು, ಈ ಮಾದರಿಯ ಸ್ಟಾಂಪಿನ ಒಂದು ಉತ್ತಮ ನಿದರ್ಶನವಾಗಿದೆ. ಈ ಲಕೋಟೆಯ ಮೇಲೆ ಮುಂಬೈನ ಥೊಜಿ ರ್ರೊಮ್ ಎಂಬುವರ ವಿಳಾಸವಿದ್ದು, ಅದನ್ನು 1850ನೇ ಜನವರಿ 4 ನೇ ತಾರೀಖು ಅಂಚೆಗೆ ಹಾಕಲಾಗಿದೆ. ಈ ಲಕೋಟೆ ಭಾರತದ ಪೇಟೆಯೊಂದರಲ್ಲಿ ಪತ್ತೆಯಾಯಿತು ಮತ್ತು ಶ್ರೀ ಹೊವಾರ್ಡ್ ಎಂಬುವರು 50 ಪೌಂಡ್‌ಗಳಿಗೆ (ರೂ. 900) ಅದನ್ನು ಕೊಂಡರು. ಅವರು ಅದನ್ನು ಲಂಡನ್ನಿನಲ್ಲಿ 1,600 ಪೌಂಡ್‌ಗಳಿಗೆ (ರೂ. 28,800) ಮಾರಿದರು. 1906ರಲ್ಲಿ 2,200 ಪೌಂಡ್‌ಗಳಿಗೆ (ರೂ. 39,600) ಅದು ಮಾರಾಟವಾಯಿತು. 1917ರಲ್ಲಿ ಅದು, ಶ್ರೀ ಎ. ಎಫ್. ಲಿಚೆನ್‌ಸ್ಟೇನ್ ಅವರ ಸ್ಟಾಂಪು ಸಂಗ್ರಹದಲ್ಲಿ ಸೇರಿತು. 1947ರಲ್ಲಿ ಅವರ ನಿಧನದ ನಂತರ, ಅವರ ಪುತ್ರಿಯು



ಈ ಪ್ರಸಿದ್ಧ ಲಕೋಟೆಯು ಮಾಲೀಕಳಾದಳು. 1968ರಲ್ಲಿ 3,80,000 ಡಾಲರ್‌ಗಳಿಗೆ (ರೂ. 28,50,000) ನ್ಯೂ ಆರ್ಲಿಯನ್ಸ್‌ನ ರೇಮಂಡ್ ಎಚ್. ವೀಲಿ ಕಂಪೆನಿಗೆ ಅದನ್ನು ಮಾರಲಾಯಿತು. ಕಾಗದದ ಸಣ್ಣ ತುಣುಕೊಂದು ಇಷ್ಟು ಭಾರೀ ಸಂಪತ್ತಾಗಬಲ್ಲುದೆಂಬುದನ್ನು ಯಾರು ತಾನೆ ಅರಿಯಬಲ್ಲರು !

ಪ್ರಸಿದ್ಧ ಸ್ಟಾಂಪುಗಳ ಪಟ್ಟಿಯಲ್ಲಿ ಇವಿಷ್ಟು ಮಾತ್ರ ಸೇರಿವೆಯೆಂದು ಭಾವಿಸಬೇಡಿ. ಇನ್ನೂ ಅನೇಕ ಸ್ಟಾಂಪುಗಳು ತಪ್ಪು ಮುದ್ರಣದಿಂದಾಗಿ ಪ್ರಸಿದ್ಧವೂ, ಅಪರೂಪವೂ ಆಗಿವೆ.

ಕಿರಿಯ ಸ್ಟಾಂಪು ಸಂಗ್ರಹಕಾರರ ಪ್ರಯೋಜನದ ಸಲುವಾಗಿ, ಅಂಚೆ ಸ್ಟಾಂಪುಗಳು, ಹೇಗೆ ಬಳಕೆಗೆ ಬಂದುವು, ಸ್ಟಾಂಪು ಸಂಗ್ರಹಣೆ ಹೇಗೆ ಪ್ರಾರಂಭವಾಯಿತು, ಅದರ ಉಪಯುಕ್ತತೆ, ಹೇಗೆ ಮತ್ತು ಯಾವ ಸ್ಟಾಂಪುಗಳನ್ನು ಸಂಗ್ರಹಿಸಬೇಕು, ಮುದ್ರಣವಿಧಾನ ಮತ್ತು ಸ್ಟಾಂಪುಗಳಿಗೆ ಸಂಬಂಧಿಸಿದ ಇತರ ವಿಷಯಗಳನ್ನು ಈ ಪುಸ್ತಕದಲ್ಲಿ ವಿವರಿಸಿದ್ದೇವೆ.











# ಅಂಚೆಯ ಕಥೆ

ಇಂದು ಅಂಚೆಯ ಸೇವಾ ಕಾರ್ಯವನ್ನು ದಿನನಿತ್ಯದ ಸಾಮಾನ್ಯ ಅನುಕೂಲಕರ ವ್ಯವಸ್ಥೆಯಾಗಿ ಪರಿಗಣಿಸಲಾಗಿದೆ. ಪತ್ರಗಳನ್ನು ಅಂಚೆಗೆ ಹಾಕುವುದು, ಮತ್ತು ಅವುಗಳನ್ನು ಪಡೆಯುವುದು ನಮ್ಮ ಅನುದಿನದ ಕಾರ್ಯದಲ್ಲಿ ಹಾಸುಹೊಕ್ಕಾಗಿ ಸೇರಿಹೋಗಿದೆ. ಆದರೆ, ಈ ವ್ಯಾಪಕವಾದ ವ್ಯವಸ್ಥೆ, ಅನೇಕ ವರ್ಷಗಳ ದೀರ್ಘ ಅವಧಿಯಲ್ಲಿ ಹೇಗೆ ಅಭಿವೃದ್ಧಿಗೊಂಡು ಇಂದಿನ ರೂಪ ತಾಳಿತು ಎಂಬುದು ಅನೇಕರಿಗೆ ತಿಳಿಯದು.

ಒಂದು ಸಾಮ್ರಾಜ್ಯದ ವಿವಿಧ ಭಾಗಗಳೊಡನೆ ಸಂಪರ್ಕ ಹೊಂದಿರಬೇಕಾದ ಅಗತ್ಯವನ್ನು ಅರಿತ ಅಂಶದಲ್ಲಿ, ಅಂಚೆ ವ್ಯವಸ್ಥೆಯ ಮೂಲವನ್ನೂ ಕಾಣಬಹುದು. ಸಂಭವಿಸುತ್ತಿರುವ ಸಂಗತಿಗಳನ್ನೆಲ್ಲಾ ಸಾರ್ವಭೌಮನಿಗೆ ಮನವರಿಕೆ ಮಾಡಿಕೊಡುವಲ್ಲಿ ಈ ಸಂಪರ್ಕ ನೆರವು ನೀಡಿತು. ಪ್ರಾರಂಭದಲ್ಲಿ ಅಂಚೆ ವ್ಯವಸ್ಥೆಯು ರಾಜರು ಮತ್ತು ಸಾರ್ವಭೌಮರಿಗೆ ಮಾತ್ರ ಮೀಸಲಾದ ಸೌಲಭ್ಯವಾಗಿತ್ತು. ಆದರೆ ಇಂದು ಅತ್ಯಂತ ಸಾಮಾನ್ಯ ವ್ಯಕ್ತಿಗೂ ಈ ಸೌಲಭ್ಯ ಲಭಿಸುತ್ತಿದೆ.

ಭಾರತದಲ್ಲಾಗಲೀ, ಈಜಿಪ್ಟಿನಲ್ಲಾಗಲೀ, ಚೀಣದಲ್ಲಾಗಲೀ ಅಥವಾ ಗ್ರೇಟ್‌ಬ್ರಿಟನ್ನಿನಲ್ಲಾಗಲೀ, ಮೊದಲ ದಿನಗಳಲ್ಲಿ, ಹರಿಕಾರರು ಒಂದು ನಿರ್ದಿಷ್ಟ ಮಾರ್ಗದಲ್ಲಿ ಓಡಿ ಪತ್ರಗಳನ್ನು ತಲುಪಿಸುವ ಏರ್ಪಾಡಿತ್ತು. ಆದರೆ ಈಗ ಸಂಪರ್ಕಸಾಧನಗಳು ತುಂಬ ಸುಧಾರಿಸಿದ್ದು. ವಿಮಾನಗಳು, ರೇಲ್ವೆ ಮತ್ತು ಮೋಟಾರುಗಳು, ಪತ್ರಗಳನ್ನು ಅವುಗಳ ನಿರ್ದೇಶಿತ ಸ್ಥಳಗಳಿಗೆ ತ್ವರಿತವಾಗಿ ಮುಟ್ಟಿಸುವಲ್ಲಿ ಮಹತ್ತರ ಪಾತ್ರ ವಹಿಸುತ್ತಿವೆ. ಆದಾಗ್ಯೂ ಅಂಚೆಯ ರಂಜನೀಯ ಪಾತ್ರವನ್ನು ಅಂಚೆ ಓಟಗಾರರಲ್ಲಿ ಕಾಣಬಹುದು. ಸಂಪರ್ಕ ವ್ಯವಸ್ಥೆಗಳಿಲ್ಲದ ಸ್ಥಳಗಳಿಗೆ ಪತ್ರಗಳನ್ನು ಕೊಂಡೊಯ್ಯುವುದು ಓಟಗಾರರ ಕೆಲಸ. ಈ ಅಂಚೆ ಓಟಗಾರರು ನಿಮ್ಮ ಪತ್ರಗಳನ್ನು ಸುರಕ್ಷಿತವಾಗಿ ತಲುಪಿಸಲು ಕಡಿದಾದ ಅರಣ್ಯಗಳನ್ನೂ, ನದಿಗಳನ್ನೂ ದಾಟಬೇಕಾಗುತ್ತದೆ, ಬೆಟ್ಟಗುಡ್ಡಗಳನ್ನು ಏರಿಳಿಯಬೇಕಾಗುತ್ತದೆ, ಕ್ರೂರ ಮೃಗಗಳು ಮತ್ತು ಡಕಾಯಿತರಿಂದ ತುಂಬಿದ ಪ್ರದೇಶಗಳಲ್ಲಿ ಧೈರ್ಯದಿಂದ ಓಡಾಡಬೇಕಾಗುತ್ತದೆ.











ಭಾರತದಲ್ಲಿ 1296ರಿಂದ ಅಂಚೆ ವ್ಯವಸ್ಥೆ ಅಸ್ತಿತ್ವದಲ್ಲಿದೆ. ಪಠಾಣ ದೊರೆ ಅಲಾವುದಿನ್ ಖಿಲ್ಜಿಯು ತನ್ನ ಸೈನ್ಯದ ಸ್ಥಿತಿಗತಿಗಳು ಮತ್ತು ಪ್ರಗತಿಯ ಬಗ್ಗೆ ಸುದ್ದಿಯನ್ನು ಸತತವಾಗಿ ಪಡೆಯಲು ಅಶ್ವಾರೋಹಿ ಮತ್ತು ಕಾಲಾಳು ಅಂಚೆ ವ್ಯವಸ್ಥೆಯನ್ನು ಹೊಂದಿದ್ದನು. ಮುಂದೆ, ಸ್ವಲ್ಪ ಕಾಲ ಮಾತ್ರ ರಾಜ್ಯಭಾರ ನಡೆಸಿದ (1541ರಿಂದ 1545) ಶೇರ್ ಷಾಹನ ಕಾಲದಲ್ಲಿ ಅಂಚೆ ವ್ಯವಸ್ಥೆ ತುಂಬ ಸುಧಾರಿಸಿತು. ಅವನು ತನ್ನ ಐದು ವರ್ಷಗಳ ಆಳ್ವಿಕೆಯಲ್ಲಿ ಬಂಗಾಳದಿಂದ ಸಿಂಧ್‌ನ ವರೆಗೆ 2,000 ಮೈಲಿ ಉದ್ದದ ಮಾರ್ಗವನ್ನು ನಿರ್ಮಿಸಿದನು. ಮತ್ತು ಮಾರ್ಗ ಮುದ್ದಕ್ಕೂ ಅಲ್ಲಲ್ಲೇ 'ಸರಾಯ್' (ವಿಶ್ರಾಂತಿಗೃಹ)ಗಳನ್ನು ಕಟ್ಟಿಸಿದನು. ಚಕ್ರಾಧಿಪತ್ಯದ ಆದ್ಯಂತ ಅಶ್ವಾರೋಹಿಗಳು ಸಮಾಚಾರ ಮುಟ್ಟಿಸುವ ಏರ್ಪಾಡನ್ನು ಅವನು ಮಾಡಿದನು. ಸಮಾಚಾರವನ್ನು ತ್ವರಿತವಾಗಿ ಮುಟ್ಟಿಸುವ ದೃಷ್ಟಿಯಿಂದ ಇಂತಹ 'ಸರಾಯ್'ಗಳಲ್ಲಿ ಅಶ್ವಗಳನ್ನು ಸದಾ ಸಿದ್ಧವಾಗಿಟ್ಟಿರಲಾಗುತ್ತಿತ್ತು. ಅಕ್ಬರನ ಕಾಲದಲ್ಲಿ (1556ರಿಂದ 1605) ಸಾರಿಗೆಯ ವಿಧಾನವನ್ನು ಮತ್ತಷ್ಟು ಉತ್ತಮ ಪಡಿಸಲಾಯಿತು. ಅಂಚೆಯನ್ನು ಒಯ್ಯಲು ಕುದುರೆಗಳ ಜೊತೆ ಒಂಟೆಗಳನ್ನೂ ಬಳಸಲಾರಂಭಿಸಲಾಯಿತು. 1672ರಲ್ಲಿ ಮೈಸೂರಿನ ಚಿಕ್ಕದೇವರಾಜರು, ತಮ್ಮ ರಾಜ್ಯದಾದ್ಯಂತ ಕ್ರಮಬದ್ಧವಾದ ಅಂಚೆ ವ್ಯವಸ್ಥೆಯನ್ನು ಏರ್ಪಡಿಸಿದ್ದರೆಂಬುದು ಇತಿಹಾಸದಿಂದ ತಿಳಿದುಬರುತ್ತದೆ.





ಮುಂದೆ ಈಸ್ಟ್ ಇಂಡಿಯಾ ಕಂಪನಿಯು ರಚನಾತ್ಮಕವಾದ ಕ್ರಮಗಳನ್ನು ಕೈಗೊಂಡಿತು 1688 ರ ವೇಳೆಗೆ ಕಂಪನಿಯ ಕಾರ್ಯ ಚಟುವಟಿಕೆಗಳು ಮದರಾಸ್, ಮುಂಬೈ ಮತ್ತು ಕಲ್ಕತ್ತಾಗೆ ವ್ಯಾಪಿಸಿತ್ತು. ಆದ್ದರಿಂದ ಕ್ರಮಬದ್ಧವಾದ ಪತ್ರ ವ್ಯವಹಾರದ ವಿನಿಮಯವೂ ಅಗತ್ಯವಾಗಿತ್ತು. ಈಸ್ಟ್ ಇಂಡಿಯ ಕಂಪನಿಯು ಮುಂಬೈ ಮತ್ತು ಮದರಾಸಿನಲ್ಲಿ ದೊಡ್ಡ ಅಂಚೆ ಕಚೇರಿಗಳನ್ನು ಸ್ಥಾಪಿಸಿತು. ಪತ್ರಗಳ ಸ್ವೀಕಾರ ಮತ್ತು ರವಾನೆಯ ಸಲುವಾಗಿ ವಿವಿಧ ಸ್ಥಳಗಳಲ್ಲಿ ಸಣ್ಣ ಕಚೇರಿಗಳನ್ನು ಸ್ಥಾಪಿಸಿತು. 1766ರಲ್ಲಿ ಲಾರ್ಡ್ ಕ್ಲೈವ್ ಅಂಚೆ ಪದ್ಧತಿಯನ್ನು ಉತ್ತಮಪಡಿಸಿದ. ಆದರೆ ಈ ವ್ಯವಸ್ಥೆ ಸರ್ಕಾರಿ ಬಳಕೆಗೆ ಮಾತ್ರ ಮೀಸಲಾಗಿತ್ತು. 1774ರಲ್ಲಿ ಅಂಚೆ ಸೌಕರ್ಯವನ್ನು ಸಾರ್ವಜನಿಕರಿಗೆ ನೀಡಲಾಯಿತು. ಆ ಕಾಲದಲ್ಲಿ ಪ್ರತಿ 100—ಮೈಲಿಗಳಿಗೆ 2–ಆಣೆಯ ಅಂಚೆ ಶುಲ್ಕ ಕನಿಷ್ಠವಾಗಿತ್ತು. ಅಂಚೆಗಾಗಿ ಹಣ ನೀಡಲು ಸಾಧ್ಯವಾಗುವಂತೆ ಟಂಕಸಾಲೆಗಳಲ್ಲಿ 2–ಆಣೆ ಮೌಲ್ಯದ ತಾಮ್ರದ ವಿಶೇಷ ನಾಣ್ಯಗಳನ್ನು ತಯಾರಿಸಲಾಯಿತು.

ಅಂಚೆ ಕಚೇರಿಯಲ್ಲಿ ಪತ್ರಗಳನ್ನು ನೀಡುವ ಸಮಯದಲ್ಲಿ ಅಂಚೆ ಶುಲ್ಕವನ್ನು ಕೊಡಬೇಕಾಗುತ್ತಿತ್ತು. ನಗದಿನಲ್ಲಿ ಶುಲ್ಕವನ್ನು ನೀಡಿದ ನಂತರ 'ಪೋಸ್ಟ್ ಪೇಡ್' ಅಥವಾ 'ಫುಲ್ ಪೋಸ್ಟ್–ಪೇಡ್' ಎಂಬ ಪದಗಳ ಮುದ್ರೆಯನ್ನು ಪತ್ರದ ಮೇಲೆ ಒತ್ತಲಾಗುತ್ತಿತ್ತು. ಅಂಚೆ ಶುಲ್ಕವನ್ನು ನೀಡದ ಪತ್ರಗಳನ್ನೂ ಸಹ ಸ್ವೀಕರಿಸಲಾಗುತ್ತಿತ್ತು. ಆದರೆ ಅಂತಹ ಪತ್ರಗಳ ಮೇಲೆ 'ಬೇರಿಂಗ್' ಅಥವಾ 'ಪೋಸ್ಟ್ ನಾಟ್–ಪೇಡ್', ಇಲ್ಲವೆ 'ಅನ್–ಪೇಡ್' ಎಂಬ ಪದಗಳ ಮುದ್ರೆಯನ್ನು ಒತ್ತಿ, ಅವುಗಳ ಅಂಚೆ ಶುಲ್ಕವನ್ನು, ಪತ್ರವನ್ನು ಸ್ವೀಕರಿಸಿದವನಿಂದ ವಸೂಲ್ಮಾಡಲಾಗುತ್ತಿತ್ತು.

ಸರ್ಕಾರವು ಅಂಚೆ ವ್ಯವಸ್ಥೆಯನ್ನು ಅಭಿವೃದ್ಧಿಪಡಿಸಿದ ಮೇಲೂ ಸಹ ಅಂಚೆಯನ್ನು ಕೊಂಡೊಯ್ಯುವ ಕಾರ್ಯವನ್ನು ಕೆಲವು ಖಾಸಗೀ ಪಂಗಡಗಳು ಮುಂದುವರೆಸಿದುವು. ಅಷ್ಟೇ ಅಲ್ಲದೆ ಸರ್ಕಾರದೊಡನೆ ಯಶಸ್ವಿಯಾಗಿ ಪೈಪೋಟಿ ನಡೆಸಿದುವು.

UNPAID

1837ರಲ್ಲಿ ಮೊದಲ ಬಾರಿಗೆ "ಅಂಚೆ ವ್ಯವಸ್ಥೆ ಕಾಯ್ದೆ" ಯನ್ನು ಅಂಗೀಕರಿಸಿದ ಪರಿಣಾಮವಾಗಿ ಅಂಚೆ ವ್ಯವಸ್ಥೆಯಲ್ಲಿ ಗಮನಾರ್ಹವಾದ ಬದಲಾವಣೆಗಳಾದುವು. ಈ ಕಾಯ್ದೆಯು

POST PAID

ಅಂಚೆ ವ್ಯವಸ್ಥೆಯನ್ನು ಆಧುನೀಕರಿಸಿತು ಮತ್ತು ಭಾರತಾದ್ಯಂತ ಈ ವ್ಯವಸ್ಥೆಯನ್ನು ನಿರ್ವಹಿಸುವ ಏಕೈಕ ಹಕ್ಕನ್ನು ಸರ್ಕಾರಕ್ಕೆ ದೊರಕಿಸಿಕೊಟ್ಟಿತು.






# ಅಂಚೆ ಸ್ಟಾಂಪಿನ ಜನನ

ಅಂಚೆ ಸ್ಟಾಂಪುಗಳು ಜಾರಿಗೆ ಬರುವ ವರೆಗೆ, ಅಂಚೆ ವೆಚ್ಚವನ್ನು ಪತ್ರ ಕಳಿಸುವವನು ನಗದಿನಲ್ಲಿ ಮೊದಲೇ ಪಾವತಿ ಮಾಡುತ್ತಿದ್ದ, ಇಲ್ಲವೆ ಪತ್ರವನ್ನು ಸ್ವೀಕರಿಸಿದವನಿಂದ ವಸೂಲು ಮಾಡಲಾಗುತ್ತಿತ್ತು. ಪತ್ರವು ಒಯ್ಯಲ್ಪಟ್ಟ ಮಾರ್ಗದ ದೂರಕ್ಕೆ ಅನುಗುಣವಾಗಿ ಅಂಚೆವೆಚ್ಚವನ್ನು ಲೆಕ್ಕ ಮಾಡಲಾಗುತ್ತಿತ್ತು. ಅಂಚೆವೆಚ್ಚವನ್ನು ಪಾವತಿ ಮಾಡಲಾಗಿದೆಯೇ ಅಥವಾ ಇಲ್ಲವೇ ಎಂಬುದನ್ನು ನಮೂದಿಸುವ ವಿವಿಧ ಮುದ್ರೆಗಳನ್ನು ಪತ್ರಗಳ ಮೇಲೆ ಒತ್ತಿರಲಾಗುತ್ತಿತ್ತು. ಆಗ ಲಕೋಟೆಗಳನ್ನು ಇನ್ನೂ ಕಂಡುಹಿಡಿದಿರಲಿಲ್ಲವಾದ್ದರಿಂದ, ಅಂಚೆಯಲ್ಲಿ ಕಳಿಸುವ ಪತ್ರವನ್ನು ಮಡಿಚಿ, ಕೆಳಗಡೆ ಅಂಟಿಸಿ, ಹಿಂಬಾಗದಲ್ಲಿ ವಿಳಾಸವನ್ನು ಬರೆಯಲಾಗುತ್ತಿತ್ತು. ಅಂಚೆ ವ್ಯವಸ್ಥೆಯಲ್ಲಿ ಸಾಕಷ್ಟು ಸುಧಾರಣೆಗಳಾಗಿದ್ದಾಗ್ಯೂ, ಸಮರ್ಥ ಹಾಗೂ ಅಗ್ಗದ ವ್ಯವಸ್ಥೆಯಾಗಿ ಅದು ಸಾರ್ವಜನಿಕರ ಬೇಡಿಕೆಯನ್ನು ಪೂರೈಸುವಲ್ಲಿ ವಿಫಲಗೊಂಡಿತ್ತು.

1835ರಲ್ಲಿ ರೊಲ್ಯಾಂಡ್ ಹಿಲ್ ಎಂಬಾತನು ಇಂಗ್ಲೆಂಡಿನಲ್ಲಿ ತೆರಿಗೆ ಪರಿಸ್ಥಿತಿಯ ಅಧ್ಯಯನವನ್ನು ಪ್ರಾರಂಭಿಸಿದನು. ದರಗಳನ್ನು ಹೆಚ್ಚಿಸಿದಾಗ್ಯೂ, ಅಂಚೆಯ ವರಮಾನ ಇಳಿಮುಖವಾಗುತ್ತಿದ್ದುದು ಅವನ ಗಮನಕ್ಕೆ ಬಂದಿತು. ಮುಂದಾಗಿ ಹಣಪಾವತಿ ಮಾಡದೆಯೇ ಅನೇಕ ಪತ್ರಗಳನ್ನು ಕಳಿಸಲಾಗುತ್ತಿದ್ದು, ವಿಳಾಸದಾರರು ಪತ್ರಗಳನ್ನು ಸ್ವೀಕರಿಸಲು ನಿರಾಕರಿಸುತ್ತಿದ್ದ ಅಂಶ ಅವನ ಅಧ್ಯಯನದಿಂದ ಬೆಳಕಿಗೆ ಬಂದಿತು. ರೊಲ್ಯಾಂಡ್‌ಗೆ ಹೇಳಲ್ಪಟ್ಟ ಕಥೆಯೊಂದರಿಂದ ಅಂಚೆ ಸೌಕರ್ಯವನ್ನು ಹೇಗೆ ತಪ್ಪುರೀತಿಯಲ್ಲಿ ಬಳಸಿಕೊಳ್ಳಲಾಗುತ್ತಿತ್ತೆಂಬುದು ಗೊತ್ತಾಗುತ್ತಿದೆ.

ಒಂದು ದಿನ ಸಭ್ಯ ಯುವಕನೊಬ್ಬನು ನಡೆದು ಹೋಗುತ್ತಿದ್ದಾಗ, ಬಡ ಕುಟೀರದಲ್ಲಿ ವಾಸಿಸುತ್ತಿದ್ದ ಮಹಿಳೆಯೊಬ್ಬಳಿಗಾಗಿ ಪತ್ರವೊಂದನ್ನು ಅಂಚೆ ಪೇದೆ ತಂದಿರುವುದನ್ನು ನೋಡಿದ. ಪತ್ರಕ್ಕಾಗಿ 1–ಷಿಲ್ಲಿಂಗ್ ಶುಲ್ಕವನ್ನು ಕೊಡುವಂತೆ ಅಂಚೆಪೇದೆ ಆಕೆಯನ್ನು ಕೇಳುತ್ತಿದ್ದ. ಆದರೆ ಆಕೆ, ವಿಷಾದ ಮುಖದೊಡನೆ ತಲೆಯಾಡಿಸಿ, ಪತ್ರವನ್ನು ತೆರೆಯದೆಯೆ ಅವನ್ನು ಹಿಂದಿರುಗಿಸಿದಳು. ಆಕೆ ತುಂಬ ಬಡವೆಯಿರಬಹುದೆಂದು ಆ ಸಭ್ಯ ಯುವಕನು ಭಾವಿಸಿ, ಮಹಿಳೆ ಪ್ರತಿಭಟಿಸುತ್ತಿದ್ದರೂ ಕೇಳದೆ, 1–ಷಿಲ್ಲಿಂಗ್ ನೀಡಿ ಆ ಪತ್ರವನ್ನು ಪಡೆದು ಆಕೆಗೆ ನೀಡಿದ. ಅಂಚೆಪೇದೆ ಮರೆಯಾಗುತ್ತಲೇ, ಆ ಹೆಂಗಸು, ಅನವಶ್ಯಕವಾಗಿ ದುಡ್ಡು ಹಾಳುಮಾಡಿಕೊಂಡನೆಂದು ಆ ಯುವಕನನ್ನು ದೂರಿದಳು. ಮತ್ತು ಆ ಪತ್ರವನ್ನು ಒಡೆದು, ಅದು ಕೇವಲ ಖಾಲಿ ಕಾಗದವೆಂಬುದನ್ನು ಅವನಿಗೆ ತೆರೆದು ತೋರಿಸಿದಳು. ಆ ಕಾಗದ ತನ್ನ ಮಗನದೆಂದೂ, ತಮ್ಮಿಬ್ಬರಿಗೂ ಯಾವ ರೀತಿಯಲ್ಲೂ ಹಣ ಖರ್ಚಾಗದ ರೀತಿಯಲ್ಲಿ ತನ್ನ ಯೋಗಕ್ಷೇಮವನ್ನು ತಿಳಿಸಲು ತನ್ನ ಮಗ ಈ ಉಪಾಯವನ್ನು ಹೂಡಿದ್ದಾನೆಂದೂ ಅವಳು ಹೇಳಿದಳು !

ಅಂಚೆಯ ಹೆಚ್ಚಿನ ದರದಿಂದಾಗಿ, ಅನೇಕರು ಹಣ ನೀಡದೆಯೇ ಈ ಸೇವೆಯ ಉಪಯೋಗ ಪಡೆಯಲು ಯತ್ನಿಸುತ್ತಿದ್ದರು.

ರೋಲ್ಯಾಂಡ್ ಹಿಲ್, ಪತ್ರವನ್ನು ಒಯ್ಯಲು ತಗಲುವ ಖರ್ಚನ್ನು ಅಂದಾಜುಮಾಡಿದನು. ಲಂಡನ್ನಿನಿಂದ ಎಡಿನ್‌ಬರೋಗೆ ಒಂದು ಪತ್ರವನ್ನು ತಲುಪಿಸಲು ಒಂದು ಪೆನ್ನಿಯ ಕೇವಲ 36ನೇ ಒಂದು ಭಾಗ ಮಾತ್ರ ಖರ್ಚಾಗುವುದೆಂಬುದು ಅವನ ಅಂದಾಜಿನಿಂದ ಗೊತ್ತಾಗುತ್ತಿತ್ತು. 1837ರಲ್ಲಿ 'ಪೋಸ್ಟ್ ಆಫೀಸ್ ರಿಫಾರ್ಮ್' (ಅಂಚೆ ಕಚೇರಿ ಸುಧಾರಣೆ) ಎಂಬ ಕಿರು ಹೊತ್ತಿಗೆಯನ್ನು ಅವನು ಪ್ರಕಟಿಸಿದನು. ಅಂಚೆಯನ್ನು ತಲುಪಿಸಬೇಕಾದ ಸ್ಥಳ ಎಷ್ಟೇ ದೂರವಿದ್ದರೂ, ಅಂಚೆಯ ಶುಲ್ಕ ತುಂಬ ಕಡಮೆ ಮತ್ತು ಏಕಸ್ವರೂಪದ್ದಾಗಿರಬೇಕೆಂದೂ, ಪತ್ರವನ್ನು ರವಾನೆ ಮಾಡುವ ಮುನ್ನವೇ ಅದರ ವೆಚ್ಚವನ್ನು ಕಡ್ಡಾಯವಾಗಿ ವಸೂಲು ಮಾಡುವುದು ಅಗತ್ಯವೆಂದೂ ಅವನು ಸೂಚಿಸಿದ್ದನು. ಅಲ್ಲದೆ, ಪಣಪಾವತಿಯಾಗಿರುವುದನ್ನು ಸೂಚಿಸುವ ಸ್ಟಾಂಪನ್ನು ಮುದ್ರಿಸಿದ ಲಕೋಟೆಯನ್ನಾಗಲೀ, ಇಲ್ಲವೆ ಹೊರರಟ್ಟನ್ನಾಗಲೀ ಹೊರಡಿಸಬೇಕೆಂದು ಅವನು ಸೂಚಿಸಿದ್ದನು. ತಮ್ಮ ಸ್ವಂತ ಕಾಗದ ಲಕೋಟೆಗಳನ್ನು ಬಳಸಲು ಇಚ್ಛಿಸುವವರು ಅಂಚೆ ಕಚೇರಿಯಿಂದ ಚೀಟಿಯನ್ನು ಕೊಂಡು, ತಮ್ಮ ಪತ್ರದ ಮೇಲೆ ಅಂಟಿಸಬಹುದೆಂದು ಸೂಚಿಸಿದ್ದನು.

ಪತ್ರವನ್ನು ತಲಪಿಸಬೇಕಾದ ದೂರ ಎಷ್ಟೇ ಇದ್ದಾಗ್ಯೂ, ಅರ್ಧ ಔನ್ಸ್ ತೂಕದ ವರೆಗಿನ ಪತ್ರಕ್ಕೆ 1–ಪೆನ್ನಿಯಂತೆ ಏಕಸ್ವರೂಪ ಅಂಚೆ ದರವನ್ನು ಹೊಂದಿದ, ಮತ್ತು ಅಂಚೆಯ ಶುಲ್ಕ

ಮೊದಲೇ ಪಾವತಿಯಾಗಿರುವುದನ್ನು ತಿಳಿಸುವ ಗುರುತುಚೀಟಿಯನ್ನು ಹೊಂದಿದ ಲಕೋಟೆಯನ್ನು ಹೊರಡಿಸುವ ಸೂತ್ರವನ್ನು ಗ್ರೇಟ್‌ಬ್ರಿಟನ್ 1840ನೇ ಜನವರಿ 10ನೇ ತಾರೀಕು ಅಂಗೀಕರಿಸಿತು.

"ಅತ್ಯುತ್ತಮ ರೀತಿಯಲ್ಲಿ ಸ್ಟಾಂಪನ್ನು ಬಳಸುವ ವಿಧಾನ"ವನ್ನು ಸೂಚಿಸುವ ಸಲುವಾಗಿ ಒಂದು ಸ್ಪರ್ಧೆಯನ್ನು ಏರ್ಪಡಿಸಲಾಯಿತು. ಸಲಹೆಗಳನ್ನು ನೀಡುವಾಗ ಈ ಕೆಳಕಂಡ ನಿಯಮಗಳನ್ನು ಗಮನದಲ್ಲಿಟ್ಟಿರುವುದು ಅಗತ್ಯವಾಗಿತ್ತು:

1. ಸ್ಟಾಂಪ್ ನಿರ್ವಹಣೆಗಾಗಿ ಅನುಕೂಲವಾಗಿರಬೇಕು.
2. ನಕಲಿನ ವಿರುದ್ಧ ಅದಕ್ಕೆ ಸುರಕ್ಷತೆಯಿರಬೇಕು.
3. ಅಂಚೆ ಕಚೇರಿಯಲ್ಲಿ ಅದನ್ನು ಪರೀಕ್ಷಿಸಲು ಮತ್ತು ತಪಾಸಣೆ ನಡೆಸಲು ಅನುಕೂಲವಿರಬೇಕು.
4. ಸ್ಟಾಂಪುಗಳ ಉತ್ಪಾದನೆ ಮತ್ತು ಚಲಾವಣೆಗೆ ಎಷ್ಟು ಖರ್ಚು ತಗಲಬಹುದೆಂಬುದನ್ನು ನಮೂದಿಸಬೇಕು.

2600ಕ್ಕೂ ಹೆಚ್ಚು ಪ್ರವೇಶಗಳು ಇಲ್ಲವೆ 'ಪ್ರಬಂಧ'ಗಳು ಸ್ವೀಕೃತವಾದುವು. 100-ಪೌಂಡ್‌ಗಳ (ರೂ. 1,800) ನಾಲ್ಕು ಬಹುಮಾನಗಳನ್ನು ನೀಡಲಾಯಿತು. ಆದರೆ, ಅವುಗಳ ಪೈಕಿ ಯಾವುದನ್ನೂ ಸ್ಟಾಂಪಿನ ಉತ್ಪಾದನೆಗಾಗಿ ಬಳಸಲಿಲ್ಲ. ರೊಲ್ಯಾಂಡ್ ಹಿಲ್ ಅವರು ಮೆಸರ್ಸ್ ಪರ್ಕಿನ್ಸ್, ಬೆಕನ್ ಆ್ಯಂಡ್ ಕಂ.ಯೊಡನೆ ನಡೆಸಿದ ಸಂಧಾನಗಳ ಫಲಿತಾಂಶವಾಗಿ ರೂಪುಗೊಂಡ ಸ್ಟಾಂಪನ್ನು ಅಂತಿಮವಾಗಿ ಹೊರಡಿಸಲಾಯಿತು. ವಿಶ್ವದಲ್ಲೇ ಪ್ರಪ್ರಥಮ ಅಂಚೆ ಸ್ಟಾಂಪಾದ 'ಪೆನ್ನಿ-ಬ್ಲ್ಯಾಕ್', 1840ನೇ ಮೇ 6ರಂದು ಬಳಕೆಗೆ ಬಂದಿತು.


ಬ್ರೆಜಿಲಿಯದ "ಬುಲ್ಸ್-ಐಸ್"

ಅಂಚೆ ಶುಲ್ಕವನ್ನು ಮೊದಲೇ ವಸೂಲು ಮಾಡುವ ಈ ಕ್ರಮದಿಂದ, ಪತ್ರವನ್ನು ತಲುಪಿಸುವ ಸಮಯದಲ್ಲಿ ಹಣವನ್ನು ವಸೂಲು ಮಾಡುವಲ್ಲಿ ಎದುರಿಸಬೇಕಾಗಿದ್ದ ಅನೇಕ ತೊಡಕುಗಳು ನಿವಾರಣೆಯಾದವು ಮತ್ತು ವರಮಾನದಲ್ಲಿ ಹಿಂದೆ ಉಂಟಾಗುತ್ತಿದ್ದ ಅಪಾರ ನಷ್ಟ ನಿಂತಿತು. ಬ್ರಿಟಿಷ್ ಅನುಭವದ ಈ ಯಶಸ್ಸು, ಇತರ ದೇಶಗಳೂ ಅಂಚೆ ಸ್ಟಾಂಪನ್ನು ಹೊರಡಿಸುವುದಕ್ಕೆ ಮಾರ್ಗ ನೀಡಿತು. ಸ್ಟಾಂಪುಗಳನ್ನು ಹೊರಡಿಸುವಲ್ಲಿ ಬ್ರೆಜಿಲ್ ಎರಡನೆ



ಬೆಸೆಲ್ ಡೂವ್




ಜ್ಯೂರಿಚ್



ಲೇಡಿ ಮೆಕ್ಲಿಯಾಡ್

ಯದು (1843). ಅದೇ ವರ್ಷ ಜ್ಯೂರಿಚ್ ಮತ್ತು ಜಿನೀವಾ ಜಿಲ್ಲೆಗಳು ತಮ್ಮ ಸ್ವಂತ ಸ್ಟಾಂಪುಗಳನ್ನು ಹೊರಡಿಸಿದವು. 1845ರಲ್ಲಿ ಬಸೆಲ್ ಜಿಲ್ಲೆ ತನ್ನ ಸ್ಟಾಂಪನ್ನು ಹೊರಡಿಸಿತು. 1847ರಲ್ಲಿ ಅಮೆರಿಕ ಸಂಯುಕ್ತ ಸಂಸ್ಥಾನ, ಟ್ರಿನಿಡಾಡ್ ಮತ್ತು ಮಾರಿಷಸ್ ತಮ್ಮ ಸ್ವಂತ ಸ್ಟಾಂಪುಗಳನ್ನು ಹೊರಡಿಸಿದವು. 1849ರಲ್ಲಿ ಫ್ರಾನ್ಸ್, ಬೆಲ್ಜಿಯಂ ಮತ್ತು ಬವೇರಿಯ ಸ್ಟಾಂಪುಗಳನ್ನು ಹೊರಡಿಸಿದವು. 1850ರ ನಂತರ ಅನೇಕ ದೇಶಗಳು ಸ್ಟಾಂಪುಗಳನ್ನು ಹೊರಡಿಸುವ ದೇಶಗಳ ಪಟ್ಟಿಯಲ್ಲಿ ಸೇರಲಾರಂಭಿಸಿದವು.





# ಭಾರತದ ಅಂಚೆ ಸ್ಟ್ಯಾಂಪುಗಳ ಇತಿಹಾಸ

ಭಾರತದಲ್ಲಿ ಕಾಗದದ ಸ್ಟ್ಯಾಂಪು ಜಾರಿಗೆ ಬಂದದ್ದು 1852ರಲ್ಲಿ. ಆಗ ಸಿಂಧ್‌ನ ಕಮಿಷನರ್ ಆಗಿದ್ದ ಶ್ರೀ ಬರ್ನಾರ್ಡ್ ಫ್ರೆರ್ ಎಂಬುವರು, ಅಂಚೆ ಶುಲ್ಕವನ್ನು ಮುಂದಾಗಿ ಪಡೆದ ಸಂಕೇತವಾಗಿ ಕಾಗದದ ಸ್ಟ್ಯಾಂಪನ್ನು ಸಿಂಧ್ ಪ್ರಾಂತದಲ್ಲಿ ಜಾರಿಗೆ ತಂದರು. ಪ್ರಸಿದ್ಧವಾದ ಈ 'ಸಿಂದೆ ಡಾಕ್ಸ್' (ಸಿಂದೆ ಮಜಲು ಟಪಾಲು) ಸ್ಟ್ಯಾಂಪುಗಳು ಭಾರತದಲ್ಲಿ ಮಾತ್ರವಲ್ಲದೆ, ಇಡೀ ವಿಶ್ವದಲ್ಲೇ ಪ್ರಪ್ರಥಮವಾಗಿ ಜಾರಿಗೆ ಬಂದ ಕಾಗದದ ಸ್ಟ್ಯಾಂಪಾಗಿತ್ತು. ಸ್ಟ್ಯಾಂಪಿನ ವಿನ್ಯಾಸದ ಮಧ್ಯದಲ್ಲಿ ಈಸ್ಟ್ ಇಂಡಿಯಾ ಕಂಪೆನಿಯ ಅಗಲವಾದ ಬಾಣದ ಚಿತ್ರವಿತ್ತು. ಅದು, ಸುತ್ತ ವಿವಿಧ ವರ್ಣಗಳ ಉಬ್ಬುಚ್ಚನ್ನು ಹೊಂದಿತ್ತು. ಮೊದಲು ಕುಂಕುಮ ಬಣ್ಣದ ಸ್ಟ್ಯಾಂಪುಗಳನ್ನು ಹೊರಡಿಸಲಾಯಿತು. ಆದರೆ ಅವು ಹೆಚ್ಚು ಕಾಲ ಬಾಳುವಂತಿರಲಿಲ್ಲ. ತೆಳುವಾದ ಮತ್ತು ಗರಿಯಾದ ಕಾಗದದ ಮೇಲೆ ಉಬ್ಬುಚ್ಚು ಮಾಡುತ್ತಿದ್ದುದರಿಂದ ಸ್ಟ್ಯಾಂಪುಗಳು ಬೇಗ ಹರಿದು ಹೋಗುತ್ತಿದ್ದುವು. ಅನಂತರ ಬಿಳಿಯ ಸ್ಟ್ಯಾಂಪುಗಳನ್ನು ಹೊರಡಿಸಲಾಯಿತು. ಆದರೆ ಬಿಳಿಯ ಕಾಗದದ ಮೇಲಿನ ಉಬ್ಬುಚ್ಚು ಸ್ಪಷ್ಟವಾಗಿ ಕಾಣುತ್ತಿರಲಿಲ್ಲ. ಆದ್ದರಿಂದ ಅಂತಿಮವಾಗಿ ಬಿಳಿಯ ಕಾಗದದ ಮೇಲೆ ನೀಲಿ ಬಣ್ಣದಲ್ಲಿ ಉಬ್ಬುಚ್ಚುಗಳನ್ನು ಒತ್ತಲಾಗುತ್ತಿತ್ತು.

'ಸಿಂದೆ ಡಾಕ್ಸ್'ನ ನಂತರ ಭಾರತದಲ್ಲಿ ಏಕಸ್ವರೂಪದ ಸ್ಟ್ಯಾಂಪುಗಳನ್ನು ಹೊರಡಿಸಲಾಯಿತು. 'ಲಯನ್ ಆ್ಯಂಡ್ ದ ಪಾಮ್ ಟ್ರೀ'ಯ (ಸಿಂಹ ಮತ್ತು ತಾಳೆ ಮರ) ಮೊದಲ ವಿನ್ಯಾಸವನ್ನು ಕಲ್ಕತ್ತೆಯ ಟಂಕಸಾಲೆಯ ಕರ್ನಲ್ ಫೋರ್ಬೆ ಸಿದ್ಧಪಡಿಸಿದರು. ಆದರೆ ತಮ್ಮಲ್ಲಿದ್ದ ಯಂತ್ರದಿಂದ ವಿಪುಲವಾದ ಪ್ರಮಾಣದಲ್ಲಿ ಸ್ಟ್ಯಾಂಪುಗಳನ್ನು ಒದಗಿಸುವ ಭರವಸೆಯನ್ನು ಅವರು ನೀಡಲಿಲ್ಲವಾದ್ದರಿಂದ ಈ ವಿನ್ಯಾಸ ಬೆಳಕಿಗೆ ಬರಲಿಲ್ಲ.

ಅನಂತರ ಡೆಪ್ಯೂಟಿ ಸರ್ವೆಯರ್ ಜನರಲ್ ಆದ ಕ್ಯಾಪ್ಟನ್ ಥುಯಿಲಿಯರ್ ಎಂಬುವರು ಕಲ್ಲಚ್ಚಿನ ಮೂಲಕ ಸ್ಟಾಂಪನ್ನು ಮುದ್ರಿಸುವ ಪ್ರಯತ್ನದಲ್ಲಿ ತೊಡಗಿದರು. ಅಮಿತ ಉತ್ಸಾಹ ಮತ್ತು ಸತತ ಪ್ರಯತ್ನದ ಫಲವಾಗಿ ಅವರು 1854ನೇ ಸೆಪ್ಟೆಂಬರ್‌ನಲ್ಲಿ ಮೊದಲನೇ ಅಖಿಲ ಭಾರತ ಸ್ಟಾಂಪನ್ನು ಹೊರತರುವಲ್ಲಿ ಯಶಸ್ವಿಯಾದರು. $\frac{1}{2}$–ಆಣೆ ಮೌಲ್ಯದ ಈ ಸ್ಟಾಂಪಿನ ಮೇಲೆ ವಿಕ್ಟೋರಿಯಾ ರಾಣಿಯ ತಲೆಯಿದ್ದು. ನೀಲಿ ಬಣ್ಣದಲ್ಲಿ ಅದನ್ನು ಮುದ್ರಿಸಲಾಗಿತ್ತು. ಮುಂದೆ 1–ಆಣೆ. 2–ಆಣೆ ಮತ್ತು 4–ಆಣೆ ಮೌಲ್ಯದ ಸ್ಟಾಂಪುಗಳನ್ನೂ ಹೊರತರಲಾಯಿತು.

$\frac{1}{2}$–ಆಣೆಯ ನೀಲಿ ಸ್ಟಾಂಪುಗಳನ್ನು ಮುದ್ರಿಸುವ ಮುನ್ನ, $\frac{1}{2}$–ಆಣೆಯ ಕೆಂಪು ಸ್ಟಾಂಪುಗಳ 900 ಹಾಳೆಗಳನ್ನು ಛಾಪಿಸಲಾಯಿತು. ಈ ಕೆಂಪು ಸ್ಟಾಂಪುಗಳು ಅಂಚೆಯ ಕಾಮಾನುಗಳಿಗಾಗಿ ಸ್ವಲ್ಪ ಭಿನ್ನವಾದ ರಚನೆಯನ್ನು ಹೊಂದಿದ್ದವು. ಆದರೆ ಆಮದಾದ ಕುಂಕುಮ ಬಣ್ಣದ ಮಸಿ ಮುಗಿದುಹೋದ್ದರಿಂದ ಈ ಸ್ಟಾಂಪುಗಳ ಮತ್ತಷ್ಟು ಮುದ್ರಣವನ್ನು ನಿಲ್ಲಿಸಲಾಯಿತು. ಮೊದಲ ಮುದ್ರಣದ ಈ ಸ್ಟಾಂಪುಗಳು ಉಪಯುಕ್ತವಾಗಿರಲಿಲ್ಲವಾದ್ದರಿಂದ. ಅವನ್ನೆಲ್ಲಾ ನಾಶಪಡಿಸಲಾಯಿತು. ಈ ಸ್ಟಾಂಪಿನ ಮಾದರಿಯ ಪ್ರತಿಯೊಂದನ್ನು ನಮ್ಮ ರಾಷ್ಟ್ರೀಯ ಸ್ಟಾಂಪುಗಳ
















ಸಂಗ್ರಹಾಲಯದಲ್ಲಿ ರಕ್ಷಿಸಿಡಲಾಗಿದೆ. ಹೀಗೆ ಮುದ್ರಿಸಲ್ಪಟ್ಟು, ಬಳಸಲ್ಪಡದ ½ -ಆಣೆಯ ಈ ಕೆಂಪು ಸ್ಟಾಂಪುಗಳು '9½ ಆರ್ಚ್‌ಸ್' (9½ ಕಮಾನುಗಳು) ಎಂಬ ಹೆಸರಿನಿಂದ ಜನಪ್ರಿಯ ವಾಗಿವೆ. ಕ್ಯಾಪ್ಟನ್ ಥುಯಿಲಿಯರ್‌ನಿಂದ ಮುದ್ರಿಸಲ್ಪಟ್ಟ ಈ ಸ್ಟಾಂಪುಗಳಿಗೆ ಗೋಂದು ಹಚ್ಚಿರಲಿಲ್ಲ ಮತ್ತು ಅಂಚಿನ ಸಾಲು-ರಂಧ್ರಗಳನ್ನು ಕೊರೆದಿರಲಿಲ್ಲ. ರಂಧ್ರಗಳಿರಲಿಲ್ಲವಾದ್ದ ರಿಂದ ಸ್ಟಾಂಪುಗಳನ್ನು ಹರಿದು ಬೇರ್ಪಡಿಸುವಂತಿರಲಿಲ್ಲ.

1856ರಿಂದ 1926ರ ವರೆಗೆ ಭಾರತೀಯ ಸ್ಟಾಂಪುಗಳನ್ನು ಲಂಡನ್ನಿನ ಮೆಸರ್ಸ್ ಥಾಮಸ್ ದೆ ಲಾ ರ್‍ಯೂ ಆ್ಯಂಡ್ ಕಂ.ಯವರು ಮುದ್ರಿಸಿದರು. ರಾಜನು ಬದಲಾದಂತೆ ಸ್ಟಾಂಪಿನ ಮೇಲಿನ ವಿನ್ಯಾಸವೂ ಬದಲಾಗುತ್ತಿತ್ತು. ಹೀಗೆ ಈ ಸ್ಟಾಂಪುಗಳು ರಾಣಿ ವಿಕ್ಟೋರಿಯಾ, 7ನೇ ಎಡ್ವರ್ಡ್, 5ನೇ ಜಾರ್ಜ್ ಮತ್ತು 6ನೇ ಜಾರ್ಜ್ ಅವರ ತಲೆಯನ್ನು ಅನುಕ್ರಮವಾಗಿ ಹೊಂದಿದ್ದುವು. ವಿವಿಧ ಮೌಲ್ಯದ ಸ್ಟಾಂಪುಗಳನ್ನು ವಿವಿಧ ಬಣ್ಣಗಳಲ್ಲಿ ಮುದ್ರಿಸಲಾಗುತ್ತಿತ್ತು. 1926ರಲ್ಲಿ ನಾಸಿಕ್‌ನಲ್ಲಿ ಇಂಡಿಯನ್ ಸೆಕ್ಯೂರಿಟಿ ಪ್ರೆಸ್ ಅನ್ನು ಸ್ಥಾಪಿಸಲಾಯಿತು. ಅಂಚೆ ಸ್ಟಾಂಪುಗಳ ಮುದ್ರಣದ ಹೊಣೆಗಾರಿಕೆಯನ್ನು ಅದಕ್ಕೆ ವಹಿಸಿಕೊಡಲಾಯಿತು.

1931ರಲ್ಲಿ ಹೊಸದೆಹಲಿಯ ಉದ್ಘಾಟನಾ ಸಮಾರಂಭದ ಸಂದರ್ಭದಲ್ಲಿ ಮೊದಲನೇ ಭಾರತೀಯ ಚಿತ್ರಾತ್ಮಕ ಸ್ಟಾಂಪುಗಳನ್ನು ಹೊರಡಿಸಲಾಯಿತು. ಮುಂದೆ, 1935ರಲ್ಲಿ 5ನೇ ಜಾರ್ಜ್ ದೊರೆಯ ರಜತೋತ್ಸವದ ಸಂದರ್ಭದಲ್ಲಿ ಸ್ಮಾರಕ ಸ್ಟಾಂಪುಗಳನ್ನು ಹೊರಡಿಸಲಾ ಯಿತು. 1937ರಲ್ಲಿ, ಅಂಚೆಯನ್ನು ಒಯ್ಯುವ ವಿವಿಧ ಅಂಶಗಳನ್ನು ನಿರೂಪಿಸುವ ಚಿತ್ರಗಳ ನ್ನೊಳಗೊಂಡ ಸ್ಟಾಂಪುಗಳನ್ನು ಹೊರಡಿಸಲಾಯಿತು. 2ನೇ ವಿಶ್ವಮಹಾಯುದ್ಧದ ಅಂತ್ಯದ ನೆನಪಿಗಾಗಿ 1946ರಲ್ಲಿ ನಾಲ್ಕು ವಿಶೇಷ ಸ್ಟಾಂಪುಗಳನ್ನು ಹೊರಡಿಸಲಾಯಿತು.

ಸ್ವಾತಂತ್ರ್ಯದಿಂದೀಚೆಗೆ ಭಾರತವು ತನ್ನ ಜೀವನ ಮತ್ತು ಸಂಸ್ಕೃತಿಯ ವಿವಿಧ ಅಂಶಗಳನ್ನು


















ನಿರೂಪಿಸುವ ಅನೇಕ ನಿಯತ ಹಾಗೂ ಸ್ಮಾರಕ ಅಂಚೆ ಸ್ಟಾಂಪುಗಳನ್ನು ಹೊರಡಿಸಿದೆ. ಈ ಪೈಕಿ, ನಮ್ಮ ವನ್ಯ ಜೀವಿಗಳು, ಧರ್ಮಗಳು, ಪಂಚವಾರ್ಷಿಕ ಯೋಜನೆಗೆ ಸಂಬಂಧಿಸಿದ ಕಾರ್ಯಗಳು. ಪುರಾತನ ವಾಸ್ತುಶಿಲ್ಪ, ಮಕ್ಕಳಿಗೆ ಸಂಬಂಧಿಸಿದ ಸಾಮಾಜಿಕ ಮತ್ತು ಶೈಕ್ಷಣಿಕ ವಿಷಯಗಳು. ಐತಿಹಾಸಿಕ ಘಟನೆಗಳು. ಎವರೆಸ್ಟ್ ಪರ್ವತದ ಆರೋಹಣ ಇವೇ ಮೊದಲಾದ ವಿಷಯಗಳಿಗೆ ಸಂಬಂಧಿಸಿದ, ಮತ್ತು ರಾಷ್ಟ್ರೀಯ ನಾಯಕರು, ತತ್ವಶಾಸ್ತ್ರಜ್ಞರು ಮತ್ತು ಬುದ್ಧಿಜೀವಿಗಳು. ಶಿಕ್ಷಣವೇತ್ತರು ಮತ್ತು ವಿಜ್ಞಾನಿಗಳು. ಬರಹಗಾರರು ಮತ್ತು ಕಲಾವಿದರು— ಇವರಿಗೆ ಸಂಬಂಧಿಸಿದ ಚಿತ್ರಗಳು ಸೇರಿವೆ. ಈ ಸ್ಟಾಂಪುಗಳನ್ನು ಹೆಚ್ಚು ಆಕರ್ಷಕವನ್ನಾಗಿ ಮತ್ತು ವರ್ಣರಂಜಿತವನ್ನಾಗಿ ಮಾಡಲು. 1972ನೇ ಮಾರ್ಚ್‌ನಲ್ಲಿ ನಾಸಿಕ್ ಸೆಕ್ಯೂರಿಟಿ ಪ್ರೆಸ್‌ನಲ್ಲಿ ವಿವಿಧ ವರ್ಣ ಮುದ್ರಣ ಯಂತ್ರವನ್ನು ಅಳವಡಿಸಲಾಯಿತು. ಭಾರತದ ಮುಖವಾಡಗಳು. ಸಣ್ಣ ಸಣ್ಣ ಭಾರತೀಯ ವರ್ಣ ಚಿತ್ರಗಳು, ಭಾರತೀಯ ನೃತ್ಯ—ಇವೇ ಮೊದಲಾದ ವಿಷಯಗಳಿಗೆ ಸಂಬಂಧಿಸಿದ ವರ್ಣರಂಜಿತ ಸ್ಟಾಂಪುಗಳನ್ನು ಭಾರತವು ಈಗ ಮುದ್ರಿಸುತ್ತಿದೆ. ಭಾರತದಲ್ಲಿನ ಸ್ಟಾಂಪುಗಳ ಇತಿಹಾಸದಲ್ಲಿ













ಇದು ಮತ್ತೊಂದು ಮೈಲಿಗಲ್ಲಾಗಿದೆ. ಭಾರತೀಯ ಸ್ಟಾಂಪು ಇತಿಹಾಸದಲ್ಲಿ ಮರೆಯಲಾಗದ ಇನ್ನೆರಡು ಮುಖ್ಯ ಅಂಶಗಳಿವೆ.

ಅಂಚೆಯನ್ನು ವಿಮಾನದಲ್ಲಿ ಕಳಿಸುವುದಕ್ಕೆ ಸಂಬಂಧಿಸಿದಂತೆ ವಿಶೇಷ ಸ್ಟಾಂಪುಗಳ ಸರಣಿಯನ್ನು ಹೊರಡಿಸುವಲ್ಲಿ ಭಾರತವು ಕಾಮನ್‌ವೆಲ್ತಿನಲ್ಲೇ ಮೊದಲ ದೇಶವಾಗಿದೆ. ಈ ವಿಶೇಷ ಸ್ಟಾಂಪನ್ನು 1929ರಲ್ಲಿ ಹೊರಡಿಸಲಾಯಿತು. ಅಲ್ಲದೆ, ಅಂಚೆಯನ್ನು ವಿಮಾನದಲ್ಲಿ ಒಯ್ಯುವ ಕಾರ್ಯವನ್ನು ಮೊದಲು ಪ್ರಾರಂಭಿಸಿದ್ದೂ ಭಾರತವೇ. 1911ನೇ ಇಸವಿ ಫೆಬ್ರುವರಿ 18ನೇ ತಾರೀಖು ಮೊದಲ ಸಲವಾಗಿ ಅಂಚೆಯನ್ನು ವಿಮಾನದಲ್ಲಿ ಒಯ್ಯಲಾಯಿತು. ಅಂದು, 6500 ಪತ್ರಗಳು ಮತ್ತು ಪೋಸ್ಟ್ ಕಾರ್ಡ್‌ಗಳನ್ನು ಅಲಹಾಬಾದಿನಿಂದ ನೈನಿಗೆ ಒಯ್ಯಲಾಯಿತು.







1911ರಲ್ಲಿ ಮೊದಲ ಬಾರಿಗೆ ವಿಮಾನದಲ್ಲಿ ಅಂಚೆಯನ್ನು ಒಯ್ದ ಎಂ. ಪಿಕೆಟ್.
ಅಂಚೆಯ ಮೇಲೆ ಬಳಸಿದ ಅಂಚೆಮುದ್ರೆಯ ಪಡಿಯಚ್ಚು ಎಡಭಾಗದಲ್ಲಿ ಕಾಣಬಹುದು.





# ಸ್ಟಾಂಪುಗಳ ಸಂಗ್ರಹ

ಒಂದೆ ಯುವತಿಯೊಬ್ಬಳು ಉಪಯೋಗಿಸಿದ ಅಂಚೆ ಸ್ಟಾಂಪುಗಳಿಂದ ತನ್ನ ಉಡುಪು
ಕೊಟಡಿಯನ್ನು ಅಲಂಕರಿಸುವ ವಿಚಿತ್ರ ಹವ್ಯಾಸವನ್ನು ಹೊಂದಿದ್ದಳೆಂಬುದು, ಅಂಚೆ ಸಂಗ್ರಹದ
ಬಗ್ಗೆ ಕೇಳಿಬರುವ ಮೊದಲ ಕಥೆಯಾಗಿದೆ. ಅವಳು 16,000 ಸ್ಟಾಂಪುಗಳನ್ನು ಸಂಗ್ರಹಿಸಿದ್ದಳು.
1841ರಲ್ಲಿ 'ಲಂಡನ್ ಟೈಮ್ಸ್' ಪತ್ರಿಕೆಯಲ್ಲಿ ಅವಳು ಒಂದು ಜಾಹೀರಾತು ನೀಡಿ, ತನಗೆ ಹೆಚ್ಚು
ಸ್ಟಾಂಪುಗಳನ್ನು ಕಳಿಸುವಂತೆ ಓದುಗರಿಗೆ ಮನವಿ ಮಾಡಿದ್ದಳು. ಅಂಚೆ ಸ್ಟಾಂಪುಗಳನ್ನು ಹೊರಡಿ
ಸಿದ ಮೊದಲ ವರ್ಷಗಳಲ್ಲಿ, ಈ ರೀತಿ ಸ್ಟಾಂಪುಗಳನ್ನು ಸಂಗ್ರಹಿಸುವ ಗೀಳು ವ್ಯಾಪಕವಾಗಿ
ಹಬ್ಬಿತ್ತು. ಮೊದಲು ತಾರತಮ್ಯವಿಲ್ಲದೆ ಅವ್ಯವಸ್ಥಿತ ರೀತಿಯಲ್ಲಿ ಸ್ಟಾಂಪುಗಳನ್ನು ಸಂಗ್ರಹಿಸ
ಲಾಗುತ್ತಿತ್ತು. ಆದರೆ ಮುಂದೆ, ಹೆಚ್ಚು ಲಕ್ಷ್ಯ ಮತ್ತು ವ್ಯವಸ್ಥಿತ ರೀತಿಯಲ್ಲಿ ಸ್ಟಾಂಪುಗಳ
ಸಂಗ್ರಹಣೆ ಪ್ರಾರಂಭವಾಯಿತು. ಈ ರೀತಿಯ ಸ್ಟಾಂಪು ಸಂಗ್ರಹಣೆಯು 'ಫಿಲಾಟೆಲಿ' ಎಂಬ
ಗೌರವಯುತವಾದ ಹೆಸರನ್ನು ಪಡೆಯಿತು. 'ಫಿಲೊ' (ಆಸಕ್ತಿ) ಮತ್ತು 'ಆಟೆಲಿ' (ತೆರಿಗೆ
ಯಿಂದ ವಿನಾಯಿತಿ) ಎಂಬ ಎರಡು ಗ್ರೀಕ್ ಪದಗಳ ಸಂಯೋಜನೆಯೆ 'ಫಿಲಾಟೆಲಿ'.

ಸ್ಟಾಂಪು ಸಂಗ್ರಹಣೆಯು ಈಗ ಒಂದು ಜಾಗತಿಕ ಹವ್ಯಾಸವಾಗಿದೆ. ಸ್ಟಾಂಪುಗಳ ಅಮೂ-
ಲ್ಯತೆಯಿಂದ ಮಾತ್ರವಲ್ಲದೆ, ಅವುಗಳ ವಿನ್ಯಾಸ, ಅವು ಹೇಳುವ ಕಥೆ, ಅವು ನೆನಪಿಗೆ ತರುವ
ಸಂಗತಿಗಳು ಮತ್ತು ಅವುಗಳ ಮುದ್ರಣಕ್ಕೆ ಕಾರಣವಾದ ಸಂದರ್ಭಗಳನ್ನು ಅರಿಯುವ ಕುತೂಹಲ
ದಿಂದ ಸ್ಟಾಂಪುಗಳನ್ನು ಸಂಗ್ರಹಿಸಲಾಗುವುದು. ವಾಸ್ತವವಾಗಿ ಅಂಚೆ ಸ್ಟಾಂಪುಗಳು, "ಒಂದು
ದೇಶದ ಪುರಾತನ ಸಂಪ್ರದಾಯ ಮತ್ತು ಸ್ವಭಾವವನ್ನು ವಿದೇಶೀಯರಿಗೆ ಪರಿಚಯ ಮಾಡಿ
ಕೊಡುವ ತೆರೆದ ಕಿಟಕಿಗಳು." ಅವು ವ್ಯಾಪಾರ, ಇತಿಹಾಸ, ಕಲೆ, ಕುಶಲಕೈಗಾರಿಕೆ ಸಾಮಾನ್ಯ
ಇತಿಹಾಸ ಮುಂತಾದ ರಾಷ್ಟ್ರೀಯ ಜೀವನದಲ್ಲಿ ಎಲ್ಲ ಅಂಶಗಳನ್ನೂ ನಿರೂಪಿಸುತ್ತದೆ.









ಸ್ಟಾಂಪು ಸಂಗ್ರಹಣೆಯು ಈಗ ಕೇವಲ ಹವ್ಯಾಸಕ್ಕೇ ಸೀಮಿತಗೊಂಡಿಲ್ಲ; ಅದು ಹೆಚ್ಚು ಗಂಭೀರವಾದ ಅಧ್ಯಯನದ ವಿಷಯವಾಗಿದೆ. ಅದು, ಸ್ಟಾಂಪುಗಳ ಅಧ್ಯಯನದಲ್ಲಿ ತೊಡಗಿದ ಉತ್ಸಾಹಿಗಳಿಗೆ ವಿವಿಧ ದೇಶಗಳ ಭೌಗೋಳಿಕ. ಐತಿಹಾಸಿಕ ಮತ್ತು ನೈಸರ್ಗಿಕ ಜೀವನದ ಅಧ್ಯಯನದಲ್ಲೂ ಆಸಕ್ತಿ ಮೂಡಿಸುತ್ತದೆ. ಆದ್ದರಿಂದ ಸ್ಟಾಂಪುಗಳ ಆಲ್ಬಮ್ (ಸಂಪುಟ)ವೊಂದು




ವಿಷಯಜ್ಞಾನ ಪುಸ್ತಕದಂತಿರುವುದು ಮಾತ್ರವಲ್ಲದೆ, ಮೂಲ ಸಂಶೋಧನಾ ಪುಸ್ತಕವೂ ಆಗಿರುತ್ತದೆ.

## ಯಾವುದನ್ನು ಸಂಗ್ರಹಿಸಬೇಕು ?

"ಯಾವುದನ್ನು ಸಂಗ್ರಹಿಸಬೇಕು?" ಮತ್ತು "ಹೇಗೆ ಸಂಗ್ರಹಿಸಬೇಕು?"—ಇವು ಸ್ಟಾಂಪು ಸಂಗ್ರಹಣೆಯಲ್ಲಿ ತೊಡಗುವ ಪ್ರತಿ ಹೊಸಬರೂ ಎದುರಿಸಬೇಕಾದ ಎರಡು ಸಮಸ್ಯೆಗಳಾಗಿವೆ. ಈಗ್ಗೆ ಒಂದು ನೂರು ವರ್ಷದ ಹಿಂದೆ, ಸಂಗ್ರಹಕಾರನೊಬ್ಬನು, ವಿಶ್ವದ ಎಲ್ಲಾ ಸ್ಟಾಂಪುಗಳನ್ನೂ ಸಂಪೂರ್ಣವಾಗಿ ಸಂಗ್ರಹಿಸುವುದು ಸಾಧ್ಯವಿತ್ತು. ಆದರೆ ಸ್ಟಾಂಪುಗಳ ಸಂಗ್ರಹಣೆಯ ಆಸಕ್ತಿ ಜನರಲ್ಲಿ ಹಬ್ಬಿದಂತೆ. ತಮ್ಮ ಸಂಸ್ಕೃತಿ, ಕೈಗಾರಿಕೆ. ಪ್ರಕೃತಿ ಸೌಂದರ್ಯ. ಭೌಗೋಳಿಕ ಅಂಶಗಳು ಹಾಗೂ ಇತರ ವಿವಿಧ ಸಾಧನೆಗಳ ಪರಿಚಯಕ್ಕೆ ಸ್ಟಾಂಪುಗಳು ಉತ್ತಮ ಮಾಧ್ಯಮವೆಂಬುದನ್ನು ದೇಶಗಳು ಅರಿತುಕೊಂಡವು.

ಸ್ಟಾಂಪುಗಳ ಮೇಲೆ ನಿರೂಪಿಸದಂತಹ ಯಾವುದೇ ವಿಷಯವಾಗಲೀ, ಕಾರ್ಯವಾಗಲೀ

ಇಲ್ಲವೆಂದೇ ಹೇಳಬಹುದು. ಏರ್-ಮೇಲ್‌ಗಳು, ಕಲೆ, ಪಕ್ಷಿಗಳು, ಚಿಟ್ಟೆಗಳು, ಸಂಪರ್ಕವ್ಯವಸ್ಥೆಗಳು, ಮೀನುಗಳು, ಖ್ಯಾತ ಪುರುಷರು ಮತ್ತು ಮಹಿಳೆಯರು, ಪುಷ್ಪಗಳು, ಔಷಧ, ವರ್ಣಚಿತ್ರಗಳು, ಅಂಚೆಯ ಇತಿಹಾಸ, ರೇಲ್ವೆಗಳು, ಧರ್ಮ, ಸ್ಕೌಟ್, ಬಾಹ್ಯಾಕಾಶ, ಕ್ರೀಡೆಗಳು, ನೌಕೆಗಳು ಮೊದಲಾದುವು ಜನಪ್ರಿಯ ವಿಷಯಗಳಾಗಿವೆ.

ವಿಶ್ವದ ಎಲ್ಲಾ ದೇಶಗಳೂ, 1,80,000ಕ್ಕೂ ಹೆಚ್ಚು ಅಂಚೆ ಸ್ಟಾಂಪುಗಳನ್ನು ಹೊರಡಿಸಿವೆ. ಪ್ರತಿ ವರ್ಷ 6 ಸಾವಿರದಿಂದ 7 ಸಾವಿರ ಹೊಸ ಸ್ಟಾಂಪುಗಳನ್ನು ಹೊರಡಿಸಲಾಗುತ್ತಿದೆ. ಆದ್ದರಿಂದ ಪ್ರಪಂಚದ ಎಲ್ಲಾ ಸ್ಟಾಂಪುಗಳನ್ನೂ ಸಂಗ್ರಹಿಸುವುದು ಅಸಾಧ್ಯವೆಂದೇ ಹೇಳಬಹುದು.

ಆದ್ದರಿಂದ ಸಂಗ್ರಹಕಾರರು ಒಂದು ವಿಶಿಷ್ಟ ವಿಷಯದ ಬಗ್ಗೆ, ಒಂದು ನಿರ್ದಿಷ್ಟ ದೇಶದ ಬಗ್ಗೆ ಇಲ್ಲವೆ ಒಂದು ಧರ್ಮದ ಬಗ್ಗೆ ವೈಶಿಷ್ಟ್ಯತೆಯನ್ನು ಸಾಧಿಸಲು ಯತ್ನಿಸುತ್ತಿದ್ದಾರೆ. ವಾಸ್ತವವಾಗಿ ಒಂದು ನಿರ್ದಿಷ್ಟ ವಿಷಯಕ್ಕೆ ಸಂಬಂಧಿಸಿದ ಸ್ಟಾಂಪುಗಳ ಸಂಗ್ರಹಣೆ ಕಳೆದ ಕೆಲವು ವರ್ಷಗಳಿಂದ ರೂಢಿಯಾಗುತ್ತಿದೆ. ಒಂದು ನಿರ್ದಿಷ್ಟ ವಿಷಯದ ಮೇಲಿನ ಸ್ಟಾಂಪುಗಳ ಸಂಗ್ರಹಣೆ ವ್ಯಾಪಕ ರೀತಿಯಲ್ಲಿ ಮೆಚ್ಚುಗೆ ಪಡೆಯುತ್ತಿರುವುದೂ ಇದಕ್ಕೆ ಕಾರಣವಿರಬಹುದು. ಹೆಚ್ಚು ಕಡಿಮೆ ಪ್ರತಿಯೊಬ್ಬನೂ ತನ್ನ ಮೆಚ್ಚುಗೆಯ ವಿಷಯವನ್ನು ಖಚಿತಪಡಿಸಿಕೊಂಡು, ಅದಕ್ಕೆ ಸಂಬಂಧಿಸಿದ ಸ್ಟಾಂಪುಗಳ ಸಂಗ್ರಹಣೆಯಲ್ಲಿ ತೊಡಗಬೇಕು. ವಿಷಯಗಳನ್ನು ಉಪ ಭಾಗಗಳಾಗಿ ವಿಂಗಡಿಸಬಹುದು. ಉದಾಹರಣೆಗೆ, ಪಕ್ಷಿಗಳಿಗೆ ಸಂಬಂಧಿಸಿದ ಸ್ಟಾಂಪುಗಳನ್ನು ಸಂಗ್ರಹಿಸುವವರು, ಅವನ್ನು ಭೂಪಕ್ಷಿಗಳು, ಸಮುದ್ರ ಪಕ್ಷಿಗಳು, ಆಟದ ಪಕ್ಷಿಗಳು ಮತ್ತು ಹಿಂಸ್ರಪಕ್ಷಿಗಳು ಎಂದು ವಿಂಗಡಿಸಬಹುದು.

ಆದ್ದರಿಂದ ಸ್ಟಾಂಪುಗಳನ್ನು ಸಂಗ್ರಹಿಸುವ ಮುನ್ನ ಯಾವ ವಿಷಯದ ಮೇಲೆ ಎಂಬುದನ್ನು ಖಚಿತಪಡಿಸಿಕೊಳ್ಳುವುದು ಅಗತ್ಯ. ಯಾವುದೇ ವಿಷಯವನ್ನು ಆರಿಸಿಕೊಂಡರೂ, ಅದರ ಮೇಲಿನ ಸ್ಟಾಂಪುಗಳ ಸಂಗ್ರಹಣೆ ಆದಷ್ಟು ಮಟ್ಟಿಗೆ ಪರಿಪೂರ್ಣವಾಗಿರಬೇಕು. ಅವ್ಯವಸ್ಥಿತ










ಸಂಗ್ರಹಣೆ ತಪ್ಪಬೇಕು. ಸ್ಟಾಂಪುಗಳ ಸಂಗ್ರಹಣೆ ಅಚ್ಚುಕಟ್ಟಾಗಿರಬೇಕು. ಅವ್ಯವಸ್ಥಿತ ಪ್ರಾರಂಭವು, ಎಲ್ಲಕ್ಕಿಂತ ಮಿಗಿಲಾಗಿ ನಿಮ್ಮ ಉತ್ಸಾಹವನ್ನೇ ಕುಂದಿಸುತ್ತದೆ.

ನಿಮಗೆ ಹೆಚ್ಚು ಆಸಕ್ತಿಯುತವಾದ ವಿಷಯವೊಂದನ್ನು ಆರಿಸಿಕೊಳ್ಳಿ. ಉದಾಹರಣೆಗೆ "ಸ್ವಾತಂತ್ರ್ಯದ ನಂತರ ಭಾರತ" ಎಂಬ ವಿಷಯದ ಮೇಲಿನ ಸ್ಟಾಂಪುಗಳನ್ನು ಸುಲಭವಾಗಿ ಸಂಗ್ರಹಿಸಬಹುದಾದ್ದರಿಂದ, ಹೊಸಬರು ಇಂತಹ ವಿಷಯವನ್ನು ಆರಿಸುವುದು ಒಳ್ಳೆಯದು.











## ಹೇಗೆ ಸಂಗ್ರಹಿಸಬೇಕು?

ಮೊದಲು ಸ್ಟಾಂಪುಗಳನ್ನು ಶೇಖರಿಸಲಾರಂಭಿಸಿ. ಅಪಾರ ಪ್ರಮಾಣದಲ್ಲಿ ಸ್ಟಾಂಪುಗಳು ದೊರೆಯುತ್ತವೆ. ಗೆಳೆಯರಿಂದಾಗಲೀ, ಇಲ್ಲವೆ ಕಚೇರಿಯಿಂದಾಗಲೀ ನಿಮ್ಮ ಮನೆಗೆ ಬರುವ ಪತ್ರಗಳ ಮೇಲಿನ ಸ್ಟಾಂಪನ್ನು ಗಮನಿಸಿ. ಸ್ಟಾಂಪನ್ನು ಲಕೋಟೆಯಿಂದಲೇ ಹರಿದು ತೆಗೆಯಲು ಯತ್ನಿಸಬೇಡಿ. ಸ್ಟಾಂಪಿನ ಸುತ್ತ ಸಾಕಷ್ಟು ಜಾಗವಿರುವಂತೆ ಲಕೋಟೆಯ ಕಾಗದವನ್ನು ಕತ್ತರಿಸಿ ತೆಗೆಯಿರಿ. ಉಪಯೋಗಿಸಿರುವ ಸ್ಟಾಂಪುಗಳನ್ನು ಮಾರಾಟ ಮಾಡುವ ಅಂಗಡಿಯಿಂದ ನೀವು ಒಂದು ಸಣ್ಣ ಪೊಟ್ಟಣ ಸ್ಟಾಂಪುಗಳನ್ನು ಕೊಳ್ಳಬಹುದು. ಒಂದೇ ನಮೂನೆಯ ಸ್ಟಾಂಪುಗಳ ಸಂಖ್ಯೆ ಹೆಚ್ಚಾಗಿದ್ದಲ್ಲಿ, ನಿಮ್ಮ ಶಾಲೆಯ ಗೆಳೆಯರಿಂದ ನೀವು ಅವನ್ನು ವಿನಿಮಯ ಮಾಡಿಕೊಳ್ಳಬಹುದು.

ನಿಮಗೆ ತೃಪ್ತಿಯೆನಿಸಬಹುದಾದ ಸ್ಟಾಂಪುಗಳ ಶೇಖರಣೆ ಈಗ ನಿಮ್ಮಲ್ಲಿದೆ. ಈ ಸ್ಟಾಂಪುಗಳನ್ನು ಯಾವುದರ ಮೇಲೆ ಅಂಟಿಸಬೇಕು? ಈಗ ವಿವಿಧ ರೀತಿಯ ಆಲ್ಬಮ್‌ಗಳು ದೊರೆಯುತ್ತವೆ.—ವಿವಿಧ ವಿಷಯಗಳ ಮೇಲಿನ, ವಿವಿಧ ಶೈಲಿಯ, ವಿವಿಧ ಬೆಲೆಯ ಹಾಗೂ ನಿಮ್ಮ ಸ್ಟಾಂಪುಗಳನ್ನು ಗುರುತಿಸುವಲ್ಲಿ ಸಹಾಯಕಾರಿಯಾಗುವಂತಹ ರೇಖಾಚಿತ್ರಗಳುಳ್ಳ ವಿವಿಧ



ರೀತಿಯ ಆಲ್ಬಮ್‌ಗಳು ದೊರೆಯುತ್ತವೆ. ಒಂದು ಹಾಳೆಯ ಎರಡು ಪಾರ್ಶ್ವಗಳಲ್ಲೂ ಸ್ಟಾಂಪುಗಳನ್ನು ಹಚ್ಚಬಹುದಾದಂತಹ ಆಲ್ಬಮ್‌ಗಳನ್ನು ಹೊಸಬರು ಕೊಳ್ಳದಿರುವುದು ಒಳ್ಳೆಯದು. ಏಕೆಂದರೆ, ಪ್ರತಿ ಸಲ ಆಲ್ಬಮ್‌ನ ಪುಟವನ್ನು ತೆರೆದಾಗಲೂ ಸ್ಟಾಂಪುಗಳು ಕಿತ್ತು ಹೋಗುವ, ಹರಿದುಹೋಗುವ, ಇಲ್ಲವೆ ಬೇರೆ ರೀತಿಯಲ್ಲಿ ಹಾನಿಯಾಗುವ ಸಂಭವ ಹೆಚ್ಚಾಗಿರುತ್ತದೆ. ತೆಳುವಾದ ಹಾಳೆಗಳನ್ನು ಹೊಂದಿದ ಆಲ್ಬಮ್ ಅನ್ನು ಕೊಳ್ಳುವುದು ಒಳ್ಳೆಯದು. ಸ್ಟಾಂಪುಗಳ ವಿವರಗಳನ್ನು ನೀಡುವ ಪುಟ್ಟ ಪುಸ್ತಕವೊಂದನ್ನು ಕೊಳ್ಳುವುದು ಉತ್ತಮ. ಅದು, ಸ್ಟಾಂಪನ್ನು ಹಚ್ಚಬೇಕಾದ ಸರಿಯಾದ ಜಾಗವನ್ನು ಸೂಚಿಸುವಲ್ಲಿ ನಿಮಗೆ ಮಾರ್ಗದರ್ಶನ ನೀಡುವುದಲ್ಲದೆ, ಸ್ಟಾಂಪಿಗೆ ಸಂಬಂಧಿಸಿದ ವಿವರಗಳನ್ನೂ, ಪ್ರತಿ ತಂಡದಲ್ಲಿ ಹೊರಡಿಸಿರುವ ವೈವಿಧ್ಯತೆಗಳ ಅಂಶವನ್ನೂ ನೀಡುತ್ತದೆ.

## ಸ್ಟಾಂಪುಗಳನ್ನು ಹಚ್ಚುವುದು

ಸ್ಟಾಂಪುಗಳನ್ನು ಹಚ್ಚುವ ಕಾರ್ಯವನ್ನು ಪ್ರಾರಂಭಿಸುವ ಮುನ್ನ, ಒಂದು ಪೊಟ್ಟಣದಷ್ಟು ತಿರುಗಣೆಗಳನ್ನೂ, ಚಿಮುಟವನ್ನೂ ಕೊಳ್ಳಿರಿ.

ಸ್ಟಾಂಪುಗಳನ್ನು ಹಚ್ಚುವಾಗ ಗೋಂದನ್ನಾಗಲೀ, ಅಂಟನ್ನಾಗಲೀ, ಅಂಟು-ಟೇಪನ್ನಾಗಲೀ ಎಂದೂ ಬಳಸಬೇಡಿ. ಅವು ಸ್ಟಾಂಪುಗಳಿಗೆ ಕಾಯಂ ಆಗಿ ಜಖಂ ಮಾಡುತ್ತವೆ. ನಿಮಗೆ ಅಗತ್ಯವಾಗಿರುವುದು ತಿರುಗಣೆಗಳು. ಸ್ಟಾಂಪಿನ ತಿರುಗಣೆಯನ್ನು ಆಯಾಕಾರದ ತೆಳುವಾದ, ಆದರೆ ಗಡುಸಾದ ಕಾಗದದಿಂದ ತಯಾರಿಸಲಾಗಿದೆ. ಅದಕ್ಕೆ ಎರಡುಪಟ್ಟು ಗೋಂದನ್ನು ಹಚ್ಚಿರಲಾಗುವುದು. ಇದರಿಂದ ಅವು ಒಣಗಿದಾಗ, ಸ್ಟಾಂಪಿಗೆ ಜಖಂ ಆಗದ ರೀತಿಯಲ್ಲಿ ಸ್ಟಾಂಪಿನ ಹಿಂಭಾಗದಿಂದ, ಇಲ್ಲವೆ ಆಲ್ಬಮ್ಮಿನ ಪುಟದಿಂದ ಸುಲಭವಾಗಿ ಬೇರ್ಪಡಿಸಬಹುದು. ಇವುಗಳು ಅಗ್ಗವಾಗಿರುವುದರಿಂದ ಸದಾ ಉತ್ತಮ ದರ್ಜೆಯ ತಿರುಗಣೆಗಳನ್ನೇ ಕೊಳ್ಳಿರಿ. ಒಂದು ಪಾರ್ಶ್ವದಲ್ಲಿ ಚಪ್ಪಟೆಯ ಎಳೆಯಲ್ಲಿ ಗೋಂದು ಹಚ್ಚಿರುವ ತಿರುಗಣೆಗಳು ದೊರೆಯುತ್ತವೆ. ಅವುಗಳನ್ನು ಉಪಯೋಗಿಸುವಾಗ ಅಂಟಾದ ಪಾರ್ಶ್ವವು ಮೇಲ್ಭಾಗದಲ್ಲಿರುವಂತೆ ಮಡಚಬೇಕು. ಸರಿಯಾಗಿ ಮಧ್ಯದಲ್ಲಿ ಅದನ್ನು ಮಡಚಬೇಡಿ. ಒಂದು ಭಾಗ ಉದ್ದವೂ, ಮತ್ತೊಂದು ಭಾಗ ಗಿಡ್ಡವೂ ಇರುವಂತೆ ತುದಿಯಲ್ಲಿ ಮಡಿಚಿ, ಗಿಡ್ಡ ಭಾಗವನ್ನು ಸ್ಟಾಂಪಿನ ಮೇಲೂ, ಉದ್ದ ಭಾಗವನ್ನು ಆಲ್ಬಮ್‌ನ ಮೇಲೂ ಅಂಟಿಸಬೇಕು.





ಒಳ್ಳೆಯ ಸ್ಟಾಂಪು–ಚಿಮುಟವನ್ನು ಇಟ್ಟುಕೊಂಡಿರುವುದೂ ಒಳ್ಳೆಯದು. ನಿಮ್ಮ ಹೆಬ್ಬೆರಳು ಹಾಗೂ ಇತರ ಬೆರಳುಗಳನ್ನು ಬಳಸಿದಲ್ಲಿ ಸ್ಟಾಂಪು ಕೊಳೆಯಾಗಬಹುದು. ಹಾಗೂ ಅದಕ್ಕೆ ಜಖಂ ಆಗಬಹುದು. ಆದ್ದರಿಂದ ಚಿಮುಟದ ಉಪಯೋಗ ಉತ್ತಮ. ಚಿಮುಟದ ಮೇಲೆ ದೂಳು ಕೂರದಂತೆ ನೋಡಿಕೊಳ್ಳಿ. ಅದು ತುಂಬ ಹರಿತವಾಗಿರಬಾರದು. ಪ್ರಾರಂಭದಲ್ಲಿ ಚಿಮುಟದ ಬಳಕೆ ಕಷ್ಟವೆನಿಸಬಹುದು. ಆದರೆ ಅಭ್ಯಾಸವಾದಂತೆ ಅದನ್ನು ಹೆಚ್ಚು ಕುಶಲತೆಯಿಂದ ಉಪಯೋಗಿಸುವುದನ್ನು ನೀವು ಕಲಿಯುವಿರಿ.

ಈಗ ಸ್ಟಾಂಪುಗಳು, ತಿರುಗಣೆಗಳು, ಚಿಮುಟ ಮತ್ತು ಆಲ್ಬಮ್ ನಿಮ್ಮಲ್ಲಿ ಸಿದ್ಧವಾಗಿದೆ. ನೀವು ಮಾಡಬೇಕಾದ ಮೊದಲ ಕೆಲಸವೆಂದರೆ, ಸ್ಟಾಂಪನ್ನು ಅದರ ಹಳೆಯ ಕಾಗದದಿಂದ ಬೇರ್ಪಡಿಸುವುದು. ಸ್ಟಾಂಪಿನ ಮೇಲಿರುವ ಎಲ್ಲ ಹಳೆಯ ಗೋಂದನ್ನೂ ತೆಗೆದುಹಾಕಿ. ಇದಕ್ಕೆ ಮುನ್ನ, ನಿಮ್ಮ ಎಲ್ಲ ಸಂಗ್ರಹವನ್ನೂ ಸೂಕ್ತವಾಗಿ ವಿಂಗಡಿಸಿ. ತುಂಬ ಜಖಂ ಆಗಿರುವಂತಹ ಸ್ಟಾಂಪುಗಳನ್ನು, ಅಂದರೆ, ವಿನ್ಯಾಸವು ಹರಿದುಹೋಗಿರುವ, ಅಂಚುಗಳಲ್ಲಿ ಕಿತ್ತುಹೋಗಿರುವ ಸಾಲುರಂಧ್ರಗಳು ನಶಿಸಿಹೋಗಿರುವ, ಇಲ್ಲವೆ ದಟ್ಟವಾದ ಅಂಚೆ ಮುದ್ರೆಗಳಿಂದ ಹೊಲಸಾಗಿರುವ ಸ್ಟಾಂಪುಗಳನ್ನು ತೆಗೆದುಹಾಕಿ. ಇಷ್ಟೊಂದು ಸ್ಟಾಂಪುಗಳನ್ನು ತೆಗೆದುಹಾಕಲು ನಿಮ್ಮ ಮನಸ್ಸಿಗೆ ಬೇಸರವಾಗಬಹುದು. ಆದರೆ ಸೊಗಸಾದ ಆಲ್ಬಮ್‌ಅನ್ನು ಸಿದ್ಧಪಡಿಸುವ ಗುರಿಯನ್ನು ಹೊಂದಿದ ನಿಮ್ಮಿಂದ ಇಂತಹ ತ್ಯಾಗ ಅಗತ್ಯ.

ಈಗ ಒಳ್ಳೆಯ ಸ್ಟಾಂಪುಗಳನ್ನು ತಣ್ಣನೆಯ ನೀರಿನಿಂದ ಕೂಡಿದ ಅಗಲವಾದ ಬಾಯುಳ್ಳ ಪಾತ್ರೆಯಲ್ಲಿ (ಟ್ರೇ) ಹಾಕಿ. ಅವುಗಳನ್ನು ನೀರಿನಲ್ಲಿ ಅದುಮಿ ಮತ್ತು ಅವನ್ನು ಮೆದುವಾಗಿ ಕಾಗದದಿಂದ ಬೇರ್ಪಡಿಸಿ. ಎಲ್ಲ ಸ್ಟಾಂಪುಗಳನ್ನೂ ಒಟ್ಟಿಗೆ ನೀರಿನಲ್ಲಿ ಹಾಕಿಬಿಡಬೇಡಿ. ಮೊದಲು ಒಂದೆರಡು ಹಿಡಿಯಷ್ಟು ಸ್ಟಾಂಪುಗಳನ್ನು ಮಾತ್ರ ನೆನೆಸಿ. ಕಾಗದದಿಂದ ಬೇರ್ಪಡುವ ಮಟ್ಟಿಗೆ ಅವು ಚೆನ್ನಾಗಿ ನೆನೆಯಲಿ. ಅವು ಹೀಗೆ ನೆನೆಯುತ್ತಿರುವಾಗ, ಕೆಲವೊಂದು ಸ್ಟಾಂಪಿನ ಮೇಲಿನ ಮಸಿ ಕದಡಬಹುದು. ಕೂಡಲೇ ಅಂತಹ ಸ್ಟಾಂಪುಗಳನ್ನು ತೆಗೆದುಬಿಡಿ. ಇಲ್ಲದಿದ್ದಲ್ಲಿ ಅವು ಇತರ






(1) ತಿರುಗಣೆಯನ್ನು ಮಡಚುವುದು.




(2) ಮಡಚಿದ ತಿರುಗಣೆಯನ್ನು ಸ್ಟಾಂಪಿನ ಹಿಂದೆ ಹಚ್ಚುವ ರೀತಿ

ಎಲ್ಲ ಸ್ಟಾಂಪುಗಳನ್ನೂ ಹೊಲಸು ಮಾಡಬಹುದು. ಸುಲಭವಾಗಿ ಅಳಿಸಿಹೋಗುವಂತಹ ಕೀಳು ದರ್ಜೆಯ ಮಸಿಯಿಂದ ಮುದ್ರಿಸಲ್ಪಟ್ಟ ಸ್ಟಾಂಪುಗಳನ್ನು ಪ್ರತ್ಯೇಕವಾಗಿ ಎಚ್ಚರಿಕೆಯಿಂದ ನೆನೆಹಾಕಿ. ಪ್ರತ್ಯೇಕಗೊಂಡ ಸ್ಟಾಂಪುಗಳನ್ನು ಚಿಮುಟದಿಂದ ಎತ್ತಿ ಸ್ವಚ್ಛವಾದ ಕಾಗದದ ಮೇಲೆ ಮುಖ ಕೆಳಗಿರುವಂತೆ ಹಾಕಿ ಒಣಗಿಸಿ. ಒಣಗುತ್ತಿದ್ದಂತೆ ಅವು ಸ್ವಭಾವತಃ ಸುರುಟಿಕೊಳ್ಳುತ್ತವೆ. ಅವು ಚಪ್ಪಟೆಯಾಗುವಂತೆ ಮಾಡಲು, ಚೆನ್ನಾಗಿ ಒಣಗಿದ ಮೇಲೆ ಅವನ್ನು ಪುಸ್ತಕದ ಹಾಳೆಗಳ ಮಧ್ಯೆ ಕೆಲವು ತಾಸು ಇಟ್ಟಿರಿ.

ಹೀಗೆ ನೆಂದು ಒಣಗಿ, ಚಪ್ಪಟೆಯಾದ ಸ್ಟಾಂಪುಗಳು ನಿಮ್ಮ ಆಲ್ಬಮ್‌ನಲ್ಲಿ ಸೇರಲು ಸಿದ್ಧವಾಗಿವೆ. ಸುವ್ಯವಸ್ಥಿತ ರೀತಿಯಲ್ಲಿ ಅವನ್ನು ಹಚ್ಚುವ ಸಲುವಾಗಿ, ಸ್ಟಾಂಪು







(3) ಮತ್ತು (4) ತಿರುಗಣೆಯ ಮೇಲಿಟ್ಟಿರುವ ಸ್ಟಾಂಪನ್ನು ಆಲ್ಬಮ್‌ನ ಪುಟದ ಮೇಲೆ ಹಚ್ಚುವುದು.

ಗಳನ್ನು ಪಟ್ಟಿ ಮಾಡಿ ಅವು ಸೇರಬೇಕಾದ ಪುಟಗಳ ಮೇಲೆ ಇಡಿ. ತಿರುಗಣೆಯನ್ನು ತುದಿಯಿಂದ ಮೂರನೇ ಒಂದು ಇಲ್ಲವೆ ನಾಲ್ಕನೇ ಒಂದು ಭಾಗದಷ್ಟು ದೂರದಲ್ಲಿ ಹಿಡಿದು, ಗಿಡ್ಡನೆಯ ಭಾಗವನ್ನು ಸ್ಟಾಂಪಿನ ಮೇಲ್ಭಾಗದ ಸಾಲುರಂಧ್ರದಿಂದ ಸ್ವಲ್ಪ ಕೆಳಗಿರುವಂತೆ ಅಂಟಿಸಿ. ತಿರುಗಣೆಯನ್ನು ಅಂಟಿಸುವಾಗ ಅವನ್ನು ಹೆಚ್ಚು ತೇವಗೊಳಿಸಬೇಡಿ. ಏಕೆಂದರೆ ಬಳಸಲ್ಪಡುವ ಸ್ಟಾಂಪುಗಳ ವಿಷಯದಲ್ಲಿ, ಹೆಚ್ಚಿನ ತೇವ, ಸ್ಟಾಂಪಿನ ಹಿಂದಿರುವ ಅಂಟಿನ ಮೇಲೆ ಪ್ರತಿಕೂಲ ಪರಿಣಾಮ ಉಂಟುಮಾಡಬಹುದು. ತಿರುಗಣೆಯನ್ನು ಸ್ಟಾಂಪಿನ ಮೇಲೆ ಅಂಟಿಸಿದ ನಂತರ, ತಿರುಗಣೆಯ ಇನ್ನೊಂದು ಭಾಗವನ್ನು ಅಗತ್ಯವಾದಷ್ಟು ತೇವಗೊಳಿಸಿ, ಸ್ಟಾಂಪನ್ನು ಪುಟದ ಮೇಲೆ ಗೊತ್ತಾದ ಜಾಗದಲ್ಲಿ ಅಂಟಿಸಿ ಮತ್ತು ಬೆರಳಿನಿಂದ ಅದನ್ನು ಮೃದುವಾಗಿ ಅದುಮಿ.







## ಸ್ಟಾಂಪುಗಳ ರೂಪಣೆ

ನೀವು ಒಮ್ಮೆ ಸ್ಟಾಂಪು ಸಂಗ್ರಹಣೆಯನ್ನು ಪ್ರಾರಂಭಿಸಿದಲ್ಲಿ, ಈ ಸಂಗ್ರಹಣೆ ಪರಿಪೂರ್ಣವಾಗಿರುವಂತೆ ನೋಡಿಕೊಳ್ಳುವುದು ನಿಮ್ಮ ಗುರಿಯಾಗಿರಬೇಕು. ನಿಮ್ಮ ಆಯ್ಕೆಯ ವಿಷಯಕ್ಕೆ

# 2500th BUDDHA JAYANTI









COLOUR TRIALS





PHOTOPROOFS










FINISHED STAMPS



THE ROUND FIGURE ON THE LEFT IS A REPLICA OF THE UMBRELLA WHICH ONCE SURMOUNTED A COLOSSAL BODHISATTVA STATUE AT SARNATH, CARVED IN THE REIGN OF THE KUSHAN KING KANISHKA (FIRST [illegible] CENTURY A.D.) THE UMBRELLA [illegible] FT. IN DIAMETER, AND IS ADORNED WITH CONCENTRIC DECORATIVE BANDS. THE [illegible] PROJECTING PORTION AT THE CENTRE HAS THE SHAPE OF A LOTUS. THE RING BEYOND THE LOTUS-PETALS CONTAINS A ROW OF TWELVE MYTHICAL ANIMALS. THE NEXT BAND HAS ELEVEN SYMBOLS BESIDES ONE BROKEN VIZ. THE THREE JEWELS, A PAIR OF FISH, A *FLEUR DE LIS*, A VASE WITH FOLIAGE, A CONCH, A SWASTIKA, A VASE WITH FRUITS (OR SWEETS), A CUP OF LEAVES & THREE HONEYSUCKLES. THE OUTERMOST BAND IS MADE OF LOTUS-PETALS BORDERING THE UMBRELLA. ON THE RIGHT IS SHOWN A REPRESENTATION OF THE BODHI TREE.

ARTIST'S REPRESENTATION OF THE ASVATTHA TREE (FICUS RELIGIOSA) AT BODH GAYA SEATED UNDER WHICH GAUTAMA ATTAINED ENLIGHTENMENT. IN BUDDHIST ART, THIS TREE SYMBOLIZES THE SUPREME MOMENT IN GAUTAMA'S LIFE WHEN HE BECAME THE BUDDHA.



ಸಂಬಂಧಿಸಿದ ಎಲ್ಲ ಸ್ಟಾಂಪುಗಳೂ ನಿಮ್ಮ ಆಲ್ಬಮ್ಮಿನಲ್ಲಿರಬೇಕು. ನಿಮ್ಮ ಸಂಗ್ರಹಣೆಯನ್ನು ಪೂರ್ಣಗೊಳಿಸಲು ಅಗತ್ಯವಾದ ಎಲ್ಲ ಸಮಾಚಾರವೂ ಸ್ಟಾಂಪು ವಿವರಣೆಯ ಪುಸ್ತಕದಲ್ಲಿ ದೊರೆಯುತ್ತದೆ. ನಿಮಗೆ ಬೇಕಾದ ಸ್ಟಾಂಪುಗಳೆಲ್ಲವೂ ನಿಮ್ಮಲಿಲ್ಲದಿದ್ದಾಗ್ಯೂ, ನಿಮ್ಮ ಆಲ್ಬಮ್‌ನ ಪುಟಗಳ ವಿನ್ಯಾಸವನ್ನು ರಚಿಸಿ. ಇಂತಹ ವಿನ್ಯಾಸದಲ್ಲಿ, ನಿಮ್ಮಲ್ಲಿಲ್ಲದ ಸ್ಟಾಂಪುಗಳಿಗಾಗಿ ಜಾಗವನ್ನು ಕಾದಿರಿಸಿ. ಇದರಿಂದ ಮುಂದೆ ಆ ಸ್ಟಾಂಪುಗಳು ದೊರೆತಾಗ ಸೂಕ್ತ ಜಾಗದಲ್ಲಿ ಅವನ್ನು ಹಚ್ಚುವುದು ಸಾಧ್ಯವಾಗುತ್ತವೆ. ಸ್ವಚ್ಛವಾದ, ಅಂದವಾದ ಮತ್ತು ವಿನ್ಯಾಸದಲ್ಲಿರುವ ಸ್ಟಾಂಪುಗಳು ಸದಾ ಆಕರ್ಷಕವಾಗಿರುತ್ತವೆ. ಪ್ರತಿ ಸ್ಟಾಂಪಿನ ಬಗ್ಗೆ, ಅದರ ಪರಿಚಯ ಮಾಡಿಕೊಡುವ ಪುಟ್ಟ ವಿವರಣೆಯೊಂದು ಅಗತ್ಯ. ಇಂತಹ ಬರವಣಿಗೆ, ಸ್ಟಾಂಪು ಸಂಗ್ರಹಣಾ ಹವ್ಯಾಸದ ಒಂದು ಮನರಂಜನಾ ಅಂಶವಾಗಿರುತ್ತದೆ.

ಆಲ್ಬಮ್ಮಿನ ಪುಟಗಳ ಮೇಲೆ ಸಾಮಾನ್ಯವಾಗಿ ಚಚೌಕದ ಗೆರೆಗಳಿರುತ್ತವೆ. ಅಂದರೆ, ಪುಟವನ್ನು ಸಣ್ಣ ಚೌಕಗಳಲ್ಲಿ ವಿಂಗಡಿಸಲಾಗಿರುತ್ತವೆ. ಈ ಚೌಕಗಳ ಸಂಖ್ಯೆಯನ್ನು ಲೆಕ್ಕ ಮಾಡುವುದರಿಂದ, ವಿನ್ಯಾಸದಲ್ಲಿ ಬಿಡಬೇಕಾಗಿರುವ ಜಾಗ ಮತ್ತು ಅಂತರವನ್ನು ಸುಲಭವಾಗಿ ನಿರ್ಧರಿಸಬಹುದು. ವಿನ್ಯಾಸವನ್ನು ಸಿದ್ಧಪಡಿಸುವಾಗ ಪ್ರತಿ ಸಣ್ಣ ಬರವಣಿಗೆಗೆ ಬೇಕಾದ ಸ್ಥಳದ ಬಗ್ಗೆಯೂ ಗಮನವಿಟ್ಟಿರಬೇಕು. ಸ್ಟಾಂಪುಗಳ ಮೇಲೆ ಸಾಮಾನ್ಯವಾಗಿ ದೊರೆಯುವಂತಹ ವಿವರಗಳನ್ನು, ಅಂದರೆ, ಸ್ಟಾಂಪನ್ನು ಹೊರಡಿಸಿದ ತಾರೀಖು, ಅದನ್ನು ಹೊರಡಿಸಲು ಕಾರಣ ಜಲಚಿಹ್ನೆ, ಸಾಲುರಂಧ್ರಗಳು, ಕಲಾವಿದ, ವಿನ್ಯಾಸಕಾರ ಮತ್ತು ಮುದ್ರಕನ ಹೆಸರುಗಳು, ಬಳಸಿರುವ ಕಾಗದದ ಗುಣಮಟ್ಟ, ಹೊರಡಿಸಿರುವ ಸ್ಟಾಂಪುಗಳ ಸಂಖ್ಯೆ—ಮುಂತಾದ ಅಂಶಗಳನ್ನು ನಿಮ್ಮ ಬರಹ ಒಳಗೊಂಡಿರಬೇಕು. ಬರಹವು ಸಂಕ್ಷಿಪ್ತವಾಗಿರುವುದು ಒಳ್ಳೆಯದಾದರೂ, ಸ್ಟಾಂಪುಗಳ ಆಲ್ಬಮ್, ತನ್ನ ಸ್ಟಾಂಪುಗಳ ಐತಿಹಾಸಿಕ ಅಂಶದ ವಿವರಗಳನ್ನು ಹೊಂದಿರುವಂತೆ ನೋಡಿಕೊಳ್ಳುವುದರಲ್ಲಿ ತಪ್ಪೇನಿಲ್ಲ. ಹಾಗೆಂದು ಸ್ಟಾಂಪಿನ ಮಹತ್ವವನ್ನೇ ನಿಸ್ತೇಜಗೊಳಿಸುವಂತಹ ಹಾಗೂ ಅವುಗಳ ಒಟ್ಟಾರೆ ಪರಿಣಾಮವನ್ನು ದುರ್ಬಲಗೊಳಿಸುವಂತಹ ಬರವಣಿಗೆಯನ್ನು ತಪ್ಪಿಸಿರಿ. ಬರವಣಿಗೆಯಲ್ಲಿನ ವಿವರ ದೀರ್ಘವಾಗಿದ್ದಲ್ಲಿ ಪ್ರತ್ಯೇಕ ಹಾಳೆಗಳನ್ನು ಆಲ್ಬಮ್ಮಿಗೆ ಅಂಟಿಸಿ. ಸ್ಟಾಂಪುಗಳು ಇಲ್ಲವೆ ಬರಹಗಳಿಂದ ಪುಟಗಳು ಗೊಂದಲಮಯವಾಗದಂತೆ ನೋಡಿಕೊಳ್ಳಲು, ಪುಟದ ವಿನ್ಯಾಸವನ್ನು ರಚಿಸುವಾಗಲೇ ಎಚ್ಚರಿಕೆ ವಹಿಸಿ. ಸ್ಟಾಂಪುಗಳು ಮತ್ತು ಟಿಪ್ಪಣಿಗಳನ್ನು ತುಲನಾತ್ಮಕವಾಗಿಟ್ಟಿದ್ದು, ಪುಟಗಳು ಆಕರ್ಷಕವೂ, ಭೋದಪ್ರದವೂ ಆಗಿರುವಂತೆ ನೋಡಿಕೊಳ್ಳಬೇಕು.

ಪುಟದ ವಿನ್ಯಾಸವನ್ನು ಸಿದ್ಧಪಡಿಸಿದ ನಂತರ ಸ್ಟಾಂಪುಗಳನ್ನು ಹಚ್ಚುವ ಸ್ಥಳವನ್ನೂ, ಟಿಪ್ಪಣಿಯನ್ನು ಬರೆಯುವ ಸ್ಥಳವನ್ನೂ ಆಲ್ಬಮ್ಮಿನ ಪುಟದ ಮೇಲೆ ಪೆನ್ಸಿಲ್‌ನಿಂದ ಹಗುರವಾಗಿ

ಗುರುತಿಸಿ. ಆ ಗುರುತುಗಳು ಸುಲಭವಾಗಿ ಅಳಿಸುವಂತಿರಲಿ. ಸ್ಟಾಂಪುಗಳನ್ನು ಹಚ್ಚುವ ಮುನ್ನ ಬರವಣಿಗೆಯನ್ನು ಪೂರ್ಣಗೊಳಿಸಿ. ಪುಟದ ಮೇಲಿನ ಬರಹ ಅಂದವಾಗಿಯೂ, ಅಚ್ಚುಕಟ್ಟಾಗಿಯೂ ಕಾಣುವಂತೆ ಮಾಡಲು ಕಪ್ಪು ಮಸಿಯನ್ನಾಗಲೀ, ಯೋಗ್ಯವಾದ ಸ್ಟೆನ್ಸಿಲ್ ಪೆನ್‌ಗಳ ಸಹಾಯದಿಂದ ಬರೆದ ಸ್ಟೆನ್ಸಿಲ್‌ಗಳನ್ನಾಗಲೀ ಬಳಸಬಹುದು.



# ಸ್ಟಾಂಪು ಮುದ್ರಣ

ಸ್ಟಾಂಪುಗಳನ್ನು ಹೇಗೆ ಮುದ್ರಿಸಲಾಗುವುದೆಂಬ ಕುತೂಹಲ ಸಂಗ್ರಹಕಾರರಿಗೆ ಸಹಜವಾಗಿಯೇ ಇರುತ್ತದೆ. ವಿಷಯ ನಿರೂಪಣಾಪುಸ್ತಕವು, ಟೈಪೊಗ್ರಫಿ, ಆಫ್‌ಸೆಟ್ ಲಿಥೊಗ್ರಫಿ, ಇನ್‌ಟಾಲ್ಯೊ, ಫೊಟೋಗ್ರವ್ಯೂರ್ ಮುಂತಾದ ಮುದ್ರಣ ವಿಧಾನಗಳ ಪ್ರಸ್ತಾಪವನ್ನು ಹೊಂದಿರುತ್ತದೆ. ವಾಸ್ತವವಾಗಿ ಈ ವಿಧಾನಗಳು ಯಾವ ರೀತಿ ಕೆಲಸಮಾಡುತ್ತವೆ? ಇವುಗಳ ತಾಂತ್ರಿಕ ಅಂಶಗಳು ಹೆಚ್ಚು ಜಟಿಲವಾಗಿರುತ್ತವೆ. ಆದರೆ ಅವುಗಳ ಕಾರ್ಯ ವಿಧಾನದ ಒಟ್ಟಾರೆ ಸೂತ್ರ ಸರಳವಾಗಿರುತ್ತದೆ.

ಅಂಚೆ ಸ್ಟಾಂಪುಗಳ ಉತ್ಪಾದನೆಗಾಗಿ ಬಳಸುವ ನಾಲ್ಕು ಪ್ರಮುಖ ಮುದ್ರಣ ವಿಧಾನಗಳು ಈ ರೀತಿ ಇವೆ:

## ಟೈಪೊಗ್ರಫಿ (ಮೊಳೆಯಚ್ಚು ಜೋಡಕ ಯಂತ್ರ)

ಜನರು ತಮ್ಮ ಹೆಸರುಗಳು ಮತ್ತು ವಿಳಾಸಗಳನ್ನು ಮುದ್ರಿಸಲು ರಬ್ಬರ್ ಸ್ಟಾಂಪುಗಳನ್ನು ಬಳಸುವುದನ್ನು ನೀವು ನೋಡಿದ್ದೀರಿ. ರಬ್ಬರ್ ಸ್ಟಾಂಪಿನಿಂದ ಅಕ್ಷರಗಳು ಕಾಗದದ ಮೇಲೆ ಬೀಳಲು ಅವರು ಏನು ಮಾಡುತ್ತಾರೆ? ರಬ್ಬರ್ ಸ್ಟಾಂಪಿನ ಅಕ್ಷರವುಳ್ಳ ಭಾಗದ ಮೇಲೆ ಮಸಿಯನ್ನು ಹಾಕಿ, ಅದನ್ನು ಕಾಗದದ ಮೇಲೆ ಒತ್ತಿದಲ್ಲಿ ಆ ಅಕ್ಷರಗಳು ಕಾಗದದ ಮೇಲೆ ಬೀಳುತ್ತವೆ.

ಟೈಪೊಗ್ರಫಿ ವಿಧಾನದಲ್ಲೂ ಇದೇ ಸೂತ್ರವನ್ನು ಬಳಸಲಾಗುವುದು. ಮುದ್ರಣಕ್ಕೆ ಒಳಗಾಗ ಬೇಕಾದ ವಿನ್ಯಾಸವು ಉಳಿದೆಲ್ಲಾ ಭಾಗಗಳಿಗಿಂತ ಸ್ವಲ್ಪ ಉಬ್ಬಾಗಿದ್ದು ಮಸಿಯನ್ನು ಹೀರುತ್ತದೆ. ಈ ಮಸಿಯ ಭಾಗವನ್ನು ಕಾಗದದ ಮೇಲೆ ಒತ್ತುವುದರಿಂದ ವಿನ್ಯಾಸವು ಮುದ್ರಿಸಲ್ಪಡುತ್ತದೆ.

## ಲಿಥೊಗ್ರಫಿ (ಕಲ್ಲಚ್ಚು ಮುದ್ರಣ)

ಒಂದು ಕಾಗದದ ಮೇಲೆ ನಿಮ್ಮ ಹೆಸರನ್ನು ಸಾಕಷ್ಟು ಮಸಿ ಉಳಿಯುವಂತೆ ಬರಯಿರಿ. ಮೃದು ವಾದ ರಬ್ಬರನ್ನು ಹೆಸರಿನ ಮೇಲೆ ಒತ್ತಿರಿ. ನಿಮ್ಮ ಹೆಸರು ತಿರುಗುಮುರುಗಾಗಿ ರಬ್ಬರಿನ ಮೇಲೆ ಬಿದ್ದಿರುವುದನ್ನು ನೀವು ಕಾಣುವಿರಿ. ರಬ್ಬರನ್ನು ಕೂಡಲೇ ಮತ್ತೊಂದು ಕಾಗದದ ಮೇಲೆ ಬಲವಾಗಿ ಒತ್ತಿದಲ್ಲಿ, ಮೊದಲು ಬರೆದಿದ್ದ ರೀತಿಯಲ್ಲೇ ನಿಮ್ಮ ಹೆಸರು ಈ ಕಾಗದದ ಮೇಲೆ ಬಿದ್ದಿರುವುದನ್ನು ನೀವು ಕಾಣಬಹುದು. ಆಫ್‌ಸೆಟ್ ಲಿಥೊಗ್ರಫಿಯ ಸೂತ್ರವೂ ಇದೇ ಆಗಿದೆ.





ಛಾಯಾಚಿತ್ರ ವಿಧಾನಗಳ ಮೂಲಕ ವಿನ್ಯಾಸವನ್ನು ಸತು ಇಲ್ಲವೆ ಅಲ್ಯೂಮಿನಿಯಂ ಹಾಳೆಗಳ ಮೇಲೆ ಒತ್ತಲಾಗುವುದು. ಈ ಹಾಳೆಗಳು ಕಾಗದದ ಮೇಲೆ ನೇರವಾಗಿ ಮುದ್ರಿಸುವುದಿಲ್ಲ. ಮುದ್ರಣಯಂತ್ರದಲ್ಲಿನ ರಬ್ಬರ್ ಸಿಲಿಂಡರ್‌ವೊಂದು, ಮಸಿಯಿಂದ ಲೇಪಿಸಿದ ಲೋಹದ ಹಾಳೆಗಳ ಮೇಲಿನ ವಿನ್ಯಾಸವನ್ನು ಪಡೆದು, ಕಾಗದದ ಮೇಲೆ ಮುದ್ರಿಸುತ್ತದೆ.

## ಎಂಗ್ರೇವಿಂಗ್ (ಮುದ್ರಣ ಫಲಕ ಕೆತ್ತುವುದು)

ಮೆದುವಾದ ಭಾಗವುಳ್ಳ ಮರದ ಚೂರೊಂದನ್ನು ತೆಗೆದುಕೊಳ್ಳಿ. ಅದರ ಮೇಲೆ ಹರಿತವಾದ ಚಾಕುವಿನಿಂದ ನಿಮ್ಮ ಹೆಸರನ್ನು ಹಿಮ್ಮೊಗವಾಗಿ ಕೆತ್ತಿ. ಹೀಗೆ ಕೆತ್ತಿದ ಅಕ್ಷರಗಳಲ್ಲಿ ಮಸಿಯನ್ನು ತುಂಬಿ. ನಂತರ ಬಟ್ಟೆಯ ಚೂರಿನಿಂದ ಮರದ ತುಂಡಿನ ಮೇಲ್ಭಾಗವನ್ನು ಸ್ವಚ್ಛಪಡಿಸಿ. ಬ್ಲಾಟಿಂಗ್ ಕಾಗದದ ಮೇಲೆ ಈ ಮರದ ಚೂರನ್ನಿಟ್ಟು ಒತ್ತಿದಾಗ ನಿಮ್ಮ ಹೆಸರು ಸರಿಯಾಗಿ ಅದರ ಮೇಲೆ ಬಿದ್ದಿರುವುದನ್ನು ನೀವು ಕಾಣುವಿರಿ. ಇಂಟಾಲ್ಯೊ ಮುದ್ರಣ ವಿಧಾನದ ಸೂತ್ರವೂ ಇದೇ ಆಗಿದೆ. ಪರಿಣತರು ವಿನ್ಯಾಸವನ್ನು ಹಿಮ್ಮೊಗವಾಗಿ ಕೆತ್ತಿರುತ್ತಾರೆ. ವಿನ್ಯಾಸದ ಭಾಗವು ಮಸಿಯನ್ನು ಪಡೆಯುತ್ತದೆ ಮತ್ತು ಕಾಗದದ ಮೇಲೆ ವಿನ್ಯಾಸವನ್ನು ಮುದ್ರಿಸುತ್ತದೆ. ಬೆರಳಾಡಿಸುವ ಮೂಲಕ ಮುದ್ರಿತವಾದ ವಿನ್ಯಾಸದ ಇರುವಿಕೆಯನ್ನು ಅರಿಯಬಹುದು.

## ಫೊಟೊಗ್ರವ್ಯೂರ್ (ಪ್ರಕಾಶ ಕೆತ್ತನೆ ಚಿತ್ರ ಮುದ್ರಣ)

ಈ ಮುದ್ರಣ ವಿಧಾನದ ಸೂತ್ರವೂ ಇಂಟಾಲ್ಯೊ ಸೂತ್ರದಂತೆಯೇ ಇದೆ. ಆದರೆ ಈ ವಿಧಾನದಲ್ಲಿ ವಿನ್ಯಾಸವನ್ನು ಕೈಯಿಂದ ಕೆತ್ತುವ ಬದಲು, ತೆಳುವಾದ ಪರದೆಯ ಮೂಲಕ ವಿನ್ಯಾಸದ ಛಾಯಾಚಿತ್ರವನ್ನು ತೆಗೆದುಕೊಳ್ಳಲಾಗುವುದು. ಪರದೆಯ ಮೇಲೆ ಸಣ್ಣ ಚುಕ್ಕೆಗಳು ಬಿದ್ದಿರುತ್ತವೆ. ಈ ಚುಕ್ಕೆಗಳನ್ನು ರಾಸಾಯನಿಕ ವಸ್ತುಗಳ ಸಹಾಯದಿಂದ ಯಾಂತ್ರೀಕೃತ ವಿಧಾನದಲ್ಲಿ ತಾಮ್ರದ ಹಾಳೆಯ ಮೇಲೆ ಒತ್ತಲಾಗುವುದು. ಈ ಚುಕ್ಕೆಗಳಲ್ಲಿನ ಪೊಳ್ಳುಭಾಗವು ಮಸಿಯನ್ನು ಪಡೆಯುತ್ತದೆ. ಅದನ್ನು ಕಾಗದದ ಮೇಲೆ ಒತ್ತಿದಾಗ, ವಿನ್ಯಾಸವು ಅದರ ಮೇಲೆ ಬೀಳುತ್ತದೆ. 1952ರಿಂದ ಭಾರತದ ಅಂಚೆ ಸ್ಟಾಂಪುಗಳನ್ನು ಫೊಟೊಗ್ರವ್ಯೂರ್ ವಿಧಾನದಲ್ಲಿ ಮುದ್ರಿಸಲಾಗುತ್ತಿದೆ.

ಪ್ರತಿ ವಿಧಾನವೂ ತನ್ನದೇ ಆದ ವಿಶಿಷ್ಟತೆ ಮತ್ತು ಉಪಯುಕ್ತತೆಯನ್ನು ಹೊಂದಿರುತ್ತದೆ.

ಸ್ಟಾಂಪುಗಳ ತಯಾರಿಕೆಗಾಗಿ ಅಕ್ಷರ ಮುದ್ರಣವನ್ನು ಈಗಲೂ ಬಳಸಲಾಗುವುದು, ಆದರೆ ಮುಖ್ಯವಾಗಿ ಸಮಪ್ರತಿಯ ಮುದ್ರಣದ ಸಲುವಾಗಿ ಅದನ್ನು ಬಳಸಲಾಗುವುದು.



ಹಲವಾರು ಬಣ್ಣಗಳನ್ನು ಬಳಸಬೇಕಾದ, ಆದರೆ ಅತ್ಯುತ್ತಮ ದರ್ಜೆಯ ಮುದ್ರಣದ ಅಗತ್ಯವಿಲ್ಲದಿರುವಾಗ ಆಫ್‌ಸೆಟ್ ಲಿಥೊಗ್ರಫಿಯು ಉಚಿತವೂ ಮಿತವ್ಯಯವೂ ಆಗಿರುತ್ತದೆ.

ಸ್ಪಷ್ಟವಾದ ಗೆರೆಗಳ ಉತ್ತಮ ಪುನರ್‌ಮುದ್ರಣದ ಅಗತ್ಯವಿಲ್ಲದ ವಿನ್ಯಾಸದ ಮುದ್ರಣಕ್ಕೆ, ಫೋಟೊಗ್ರವ್ಯೂರ್ ವಿಧಾನ ಅತ್ಯುತ್ತಮವಾಗಿರುತ್ತದೆ.

ಉತ್ತಮ ದರ್ಜೆಯ ಸ್ಟಾಂಪುಗಳನ್ನು ಮುದ್ರಿಸುವ ಸಲುವಾಗಿ ಎಂಗ್ರೇವಿಂಗ್, ಫೋಟೊಗ್ರವ್ಯೂರ್ ಮತ್ತು ಲಿಥೊಗ್ರಫಿ—ಈ ಮೂರೂ ವಿಧಾನಗಳ ಸಂಯೋಜನೆಯಿಂದ ಕೂಡಿದ ಮುದ್ರಣಯಂತ್ರಗಳನ್ನು ಅಭಿವೃದ್ಧಿಪಡಿಸಲಾಗಿದೆ.



# ತಪ್ಪುಗಳು ಮತ್ತು ದೋಷಗಳು




ಅತ್ಯಂತ ಜಟಿಲವಾದ ವಿಧಾನಗಳಿಂದ ಸ್ಟಾಂಪುಗಳನ್ನು ಮುದ್ರಿಸುವುದರಿಂದ, ಆಗಾಗ್ಗೆ ಮುದ್ರಣದೋಷಗಳು ಉಂಟಾಗುತ್ತವೆ. ಮುದ್ರಣದ ನಂತರ, ಸ್ಟಾಂಪುಗಳನ್ನು ಮಾರಾಟಕ್ಕಾಗಿ ಅಂಚೆ ಕಚೇರಿಗಳಿಗೆ ಕಳಿಸುವ ಮುನ್ನ ಅವನ್ನು ಕೂಲಂಕಶವಾಗಿ ಪರೀಕ್ಷಿಸಲಾಗುವುದು. ಆದರೂ, ಕೆಲವುಸಲ ದೋಷಯುಕ್ತ ಸ್ಟಾಂಪುಗಳು, ನುಸುಳಿಕೊಂಡು, ಮಾರಾಟಕ್ಕಾಗಿ ಹೋಗುತ್ತವೆ. ಇಂತಹ ದೋಷಯುಕ್ತ ಸ್ಟಾಂಪುಗಳನ್ನು ಕೊಳ್ಳಲು ಜನ ಸಾಮಾನ್ಯವಾಗಿ ಹಿಂದೆಗೆಯುತ್ತಾರೆ. ಆದರೆ ಸ್ಟಾಂಪು ಸಂಗ್ರಹಕಾರರು ಇಂತಹ ದೋಷಯುಕ್ತ ಸ್ಟಾಂಪುಗಳನ್ನು ಪಡೆಯಲು ಹಾತೊರೆಯುತ್ತಿರುತ್ತಾರೆ.

ಸ್ಟಾಂಪುಗಳ ಮುದ್ರಣದಲ್ಲಿ ವಿವಿಧ ರೀತಿಯ ತಪ್ಪುಗಳು ಮತ್ತು ದೋಷಗಳು ಉಂಟಾಗುತ್ತವೆ. ಅವುಗಳಲ್ಲಿ ಸಾಮಾನ್ಯವಾಗಿ ಕಾಣಬರುವ ಕೆಲವು ದೋಷಗಳು ಈ ರೀತಿ ಇವೆ:

## ಫ್ರೆಷ್-ಎಂಟ್ರಿ (ಹೊಸ ಪ್ರವೇಶ)

ಕೆಲವು ಸಲ, ಲೋಹದ ಹಾಳೆಯ ಮೇಲಿಟ್ಟಿರುವ ವಿನ್ಯಾಸವೊಂದು ಇತರ ವಿನ್ಯಾಸಗಳೊಡನೆ ಸರಿಹೊಂದುವುದಿಲ್ಲವೆಂಬ ಕಾರಣದಿಂದ, ಅದನ್ನು ನಾಶಪಡಿಸಿ, ಅದರ ಸ್ಥಾನದಲ್ಲಿ ಬೇರೊಂದನ್ನು ಇಡಬೇಕಾಗುತ್ತದೆ. ಮೊದಲ ವಿನ್ಯಾಸವನ್ನು ಸರಿಯಾಗಿ ಅಳಿಸಿಹಾಕದಿದ್ದಲ್ಲಿ, ಅದರ ಕೆಲವೊಂದು ರೇಖೆಗಳು ಮುದ್ರಿತ ಪ್ರತಿಗಳ ಮೇಲೆ ಕಾಣಬಹುದು. ಈ ದೋಷವನ್ನು 'ಫ್ರೆಷ್-ಎಂಟ್ರಿ' ಎಂದು ಕರೆಯಲಾಗುವುದು.

## ರೀ–ಎಂಟ್ರಿ (ಮರು ಪ್ರವೇಶ)

ವಿನ್ಯಾಸವುಳ್ಳ ಹಾಳೆ ನಶಿಸಿಹೋದಲ್ಲಿ, ಇಲ್ಲವೆ ವಿನ್ಯಾಸಕ್ಕೆ ಜಖಂ ಆದಲ್ಲಿ, ವಿನ್ಯಾಸದ ಅಕ್ಷರ-ರೇಖೆಗಳನ್ನು 'ಹರಿತ'ಗೊಳಿಸಲಾಗುವುದು. ಇಂತಹ ದುರಸ್ತಿಯನ್ನು 'ರೀ–ಎಂಟ್ರಿ' ಎಂದು ಕರೆಯಲಾಗುವುದು.

## ರೀ–ಟಚ್ (ತಿದ್ದುವುದು)

ಲಿಥೊಗ್ರಫಿ ವಿಧಾನದ ಮೂಲಕ ಮುದ್ರಿಸುವಾಗ, ಸ್ವಲ್ಪ ಕಾಲದ ಮುದ್ರಣದ ನಂತರ ಕಲ್ಲಿನ ಮೇಲಿನ, ಅಥವಾ ಹಾಳೆಯ ಮೇಲಿನ ವಿನ್ಯಾಸದ ಒಂದು ಭಾಗ ನಶಿಸಿಹೋಗಬಹುದು. ಮತ್ತಷ್ಟು ಮುದ್ರಿಸುವ ಮುನ್ನ ಈ ಭಾಗವನ್ನು ತಿದ್ದಿ ಸರಿಪಡಿಸಬೇಕು. ಹೀಗೆ ತಿದ್ದಿದ ಭಾಗ ಕೆಲವು ಸಲ ಸ್ಟ್ಯಾಂಪಿನ ಮೇಲೆ ಸ್ಪಷ್ಟವಾಗಿ ಕಾಣುತ್ತಿರುತ್ತದೆ. ಈ ದೋಷವನ್ನು 'ರೀ–ಟಚ್' ಎಂದು ಕರೆಯಲಾಗುವುದು.

## ಟೇಟ್–ಬೆಷೆ (ತಲೆಕೆಳಗು)

ಮುದ್ರಣದ ಹಾಳೆಯ ಮೇಲೆ ಗುರುತುಮಾಡುತ್ತಿರುವಾಗ, ಇಲ್ಲವೆ ಕಲ್ಲಚ್ಚಿನ ಮೇಲೆ ವಿನ್ಯಾಸವಿಡುತ್ತಿರುವಾಗ, ಒಂದು ವಿನ್ಯಾಸ ತಲೆಕೆಳಗಾಗಿ ಬೀಳಬಹುದು. ಒಂದೊಂದು ಸ್ಟ್ಯಾಂಪನ್ನು ಬಿಡಿಬಿಡಿಯಾಗಿ ಹರಿದಾಗ ಈ ತಪ್ಪು ಕಾಣುವುದಿಲ್ಲ ಆದರೆ ಹಾಳೆಯ ಮೇಲೆ ಒಂದರ ಪಕ್ಕದಲ್ಲೊಂದು ಇರುವಾಗ ಈ ತಪ್ಪು ಸ್ಪಷ್ಟವಾಗಿ ಕಾಣುತ್ತದೆ. ಇದನ್ನು 'ಟೇಟ್–ಬೆಷೆ'ಯೆಂದು ಕರೆಯಲಾಗುವುದು.



## ಡಬ್ಲ್ (ಜೋಡಿ)

ವಿವಿಧ ರೀತಿಯ 'ಡಬ್ಲ್'ಗಳಿರುತ್ತವೆ. ಮುದ್ರಿಸುತ್ತಿರುವಾಗ ಕಾಗದದ ಹಾಳೆಯೊಂದು ಎರಡುಸಲ ಯಂತ್ರದಡಿಗೆ ಹೋದಲ್ಲಿ, ವಿನ್ಯಾಸವು ಒಂದರ ಮೇಲೊಂದರಂತೆ



ಎರಡುಸಲ ಬೀಳುತ್ತವೆ. ಹೀಗೆ ಒಂದರಮೇಲೊಂದು ಬಿದ್ದ ಮುದ್ರಣದ ಅಂತರ ಹೆಚ್ಚಾದಷ್ಟೂ ಅದರ ಮೌಲ್ಯವೂ ಹೆಚ್ಚಾಗುತ್ತದೆ.

ಕೆಲವು ಸಲ ಹಾಳೆಯನ್ನು ತಪ್ಪಿನಿಂದಾಗಿ ಎರಡುಸಲ ಮುದ್ರಿಸಬಹುದು. ಅಂದರೆ, ಮುಂಭಾಗದಲ್ಲೊಂದು ಸಲ ಮತ್ತು ಹಿಂಭಾಗದಲ್ಲೊಂದು ಸಲ ಮುದ್ರಿತಗೊಳ್ಳಬಹುದು. ಇದರ ಫಲವಾಗಿ ವಿನ್ಯಾಸ ಕಾಗದದ ಎರಡೂ ಪಾರ್ಶ್ವದಲ್ಲೂ ಬಿದ್ದಿರುತ್ತದೆ. ಇಂತಹ ದೋಷ, ಸ್ಟಾಂಪು ಸಂಗ್ರಹಣೆಯಲ್ಲಿ ತುಂಬ ಮಹತ್ವಪೂರ್ಣ ಅಂಶದ್ದಾಗಿರುತ್ತದೆ.

ಸ್ಟಾಂಪಿನ ವಿನ್ಯಾಸದಲ್ಲಿ ಒಂದಕ್ಕಿಂತ ಹೆಚ್ಚು ಬಣ್ಣಗಳಿದ್ದಲ್ಲಿ, ವಿನ್ಯಾಸದ ಮೇಲೆ ಎಷ್ಟು ಬಣ್ಣಗಳಿರುತ್ತದೊ ಅಷ್ಟುಸಲ ಸ್ಟಾಂಪನ್ನು ಮುದ್ರಿಸಬೇಕಾಗುತ್ತದೆ. ಹೀಗೆ ಪ್ರತಿ ಬಣ್ಣವನ್ನು ಮುದ್ರಿಸುವಾಗಲೂ, ಸ್ಟಾಂಪನ್ನು ಸರಿಯಾದ ಸ್ಥಳದಲ್ಲಿ ಜೋಡಿಸಲು ಹೆಚ್ಚು ಜಾಗರೂಕತೆಯನ್ನು ವಹಿಸಬೇಕಾಗುತ್ತದೆ. ಈ ಹೊಂದಾಣಿಕೆಯಲ್ಲಿ ಸ್ವಲ್ಪ ತಪ್ಪಾದರೂ ಸ್ಟಾಂಪ್ ದೋಷಯುಕ್ತವಾಗುವುದು ಹಾಗೂ ಅಂತಹ ಸ್ಟಾಂಪುಗಳು, ಸಂಗ್ರಹಕಾರರಿಗೆ ಅಮೂಲ್ಯವಾದದ್ದಾಗಿರುತ್ತದೆ.

ಕಿಸ್ (ಚುಂಬನ)

ಮುದ್ರಿತ ಹಾಳೆಗಳನ್ನು ತೆಗೆಯುತ್ತಿರುವಾಗ, ಅಜಾಗರೂಕತೆಯಿಂದಾಗಿ ಕೆಲವುಸಲ ಮುದ್ರಿತ ಹಾಳೆಯು ವಿನ್ಯಾಸವುಳ್ಳ ಲೋಹದ ಹಾಳೆಗೆ ತಾಕಬಹುದು. ಇದರಿಂದ, ಕೆಲವು ಸ್ಟಾಂಪುಗಳ ಮೇಲೆ ವಿನ್ಯಾಸದ ಗುರುತು ಮತ್ತೆ ಬೀಳಬಹುದು. ವಾಸ್ತವವಾಗಿ ಇದು 'ಜೋಡಿ' ಗುರುತಾಗಿರುವುದಿಲ್ಲ. ಇಂತಹ ದೋಷವನ್ನು 'ಕಿಸ್' ಎಂದು ಕರೆಯಲಾಗುವುದು.

## ಕಲರ್ ಮಿಸ್ಸಿಂಗ್ (ಬಣ್ಣ ನಾಪತ್ತೆ)

ಕೆಲವು ಸಲ ಎರಡನೆಯ ಅಥವಾ ಮೂರನೆಯ ಬಣ್ಣವನ್ನು ಮುದ್ರಿಸುವಾಗ ಎರಡು ಹಾಳೆಗಳು ಒಟ್ಟಿಗೆ ಮುದ್ರಣಯಂತ್ರದೊಳಗೆ ಹೋಗಬಹುದು. ಇಂತಹ ಸಂದರ್ಭವಲ್ಲಿ ಕೆಳಗಿರುವ ಹಾಳೆಯ ಮೇಲೆ ಒಂದು ಬಣ್ಣ ಬೀಳುವುದಿಲ್ಲ. ಇಂತಹ ದೋಷವಿರುವ ಸ್ಟಾಂಪುಗಳಿಗಾಗಿ ಸಂಗ್ರಹಕಾರರು ಸದಾ ಅರಸುತ್ತಿರುತ್ತಾರೆ.

## ಇನ್‌ವರ್ಟೆಡ್ (ತಲೆಕೆಳಗು)

ಕೆಲವು ಸಲ ಸ್ಟಾಂಪಿನ ಅಂಚನ್ನೇ ಒಂದು ಬಣ್ಣದಿಂದಲೂ, ವಿನ್ಯಾಸದ ಮಧ್ಯಭಾಗವನ್ನು ಮತ್ತೊಂದು ಬಣ್ಣದಿಂದಲೂ ಮುದ್ರಿಸಬೇಕಾಗುವುದು. ಅಂಚನ್ನು ಮುದ್ರಿಸಿದ ನಂತರ, ಎರಡನೇ ಮುದ್ರಣಕ್ಕಾಗಿ ಹಾಳೆಯನ್ನು ತಲೆಕೆಳಗಾಗಿ ತೂರಿಸಿದಲ್ಲಿ ಮಧ್ಯದ ವಿನ್ಯಾಸವು, ಅಂಚಿಗೆ ಸಂಬಂಧಿಸಿದಂತೆ, 'ತಲೆಕೆಳಗಾಗಿ' ಬೀಳುತ್ತದೆ.

## ಚೇಂಚ್ ಆಫ್ ಷೇಡ್ (ಛಾಯಾಂತರ)

ವಿವಿಧ ಮಸಿಯ ಮಿಶ್ರಣದಿಂದಾಗಿ, ಕೆಲವು ಸಲ ಒಂದೇ ಬಣ್ಣದ ಮಸಿಯ ಛಾಯೆಯಲ್ಲಿ ಸ್ವಲ್ಪ ವ್ಯತ್ಯಾಸವಿದ್ದು, ಈ ವ್ಯತ್ಯಾಸ ಸ್ಟಾಂಪಿನ ಮೇಲೆ ಸ್ಪಷ್ಟವಾಗಿ ಕಾಣುತ್ತಿರುತ್ತದೆ. ಹಿಂದೆ ಸ್ಟಾಂಪುಗಳ ಮುದ್ರಣದಲ್ಲಿ ಈ ದೋಷ ಸಾಮಾನ್ಯವಾಗಿ ಕಾಣಬರುತ್ತಿತ್ತು.

## ಫ್ಲಾಸ್ (ಲೋಪ)

ಸ್ಟಾಂಪುಗಳನ್ನು ಮುದ್ರಿಸುತ್ತಿರುವಾಗ. ಕೆಲವು ಸಲ, ಹಾಳೆಗಳು ಮಡಚಿಕೊಂಡಲ್ಲಿ ಇಲ್ಲವೆ ಸುಕ್ಕಾದಲ್ಲಿ, ಇವುಗಳಿಂದ, ಮುದ್ರಿತ ಸ್ಟಾಂಪುಗಳ ಮೇಲೆ ಬಿಳಿಯ ಪಟ್ಟಿ ಬೀಳಬಹುದು. ಕೆಲವು ಸಲ ಸ್ಟಾಂಪುಗಳ ವಿನ್ಯಾಸದ ಒಂದು ಭಾಗವೇ ನಾಪತ್ತೆಯಾಗಿರಬಹುದು. ಇವುಗಳನ್ನು 'ಫ್ಲಾಸ್' ಅಥವ 'ಫ್ರೀಕ್ಸ್' (ಕಲೆ) ಎಂದು ಕರೆಯಲಾಗುವುದು.

ಸ್ಟಾಂಪುಗಳ ಸಂಗ್ರಹಣೆಯು, ಇಂತಹ ದೋಷಯುಕ್ತ ಸ್ಟಾಂಪುಗಳನ್ನು ಒಳಗೊಂಡಲ್ಲಿ ಅದು ಹೆಚ್ಚು ಆಸಕ್ತಿಯುತವಾಗಿರುತ್ತದೆ. ಆದ್ದರಿಂದ ಸ್ಟಾಂಪು ಸಂಗ್ರಹಕಾರನು ಜಾಗರೂಕತೆಯಿಂದ ಗಮನಿಸುತ್ತಿದ್ದು ಇಂತಹ ದೋಷಯುಕ್ತ ಸ್ಟಾಂಪುಗಳನ್ನು ಪತ್ತೆ ಹಚ್ಚಿ, ಅವನ್ನು ತನ್ನ

ಸಂಗ್ರಹದಲ್ಲಿ ಸೇರಿಸಬೇಕು. ಇಂತಹ ದೋಷಯುಕ್ತ ಸ್ಟಾಂಪುಗಳ ಸಂಗ್ರಹಣೆಯು ಆಸಕ್ತಿಯುತ ವಾಗಿರುವುದು ಮಾತ್ರವಲ್ಲದೆ, ಅಮೂಲ್ಯವೂ ಆಗಿರುತ್ತದೆ. ಕೈಯಿಂದ ಕೈಗೆ ಬದಲಾಯಿಸಿದಂತೆ, ಅವುಗಳ ಮೌಲ್ಯವೂ ಹೆಚ್ಚಿ, ಅವು ಅಪಾರ ಹಣ ತರುವುದರಿಂದ ಇಂತಹ ಸ್ಟಾಂಪುಗಳನ್ನು ಪಡೆಯಲು ಸಂಗ್ರಹಕಾರರು ಸದಾ ಕಾತುರರಾಗಿರುತ್ತಾರೆ.



ಇಲ್ಲಿ ಸೂಚಿಸಲಾಗಿರುವ ದೋಷಗಳೆಲ್ಲಾ ಮುಖ್ಯವಾಗಿ ಮುದ್ರಣದಿಂದ ಉಂಟಾಗಿರುತ್ತವೆ. ಆದ್ದರಿಂದ ಸಂಗ್ರಹಕಾರನು ಮುದ್ರಣದ ತಪ್ಪುಗಳುಳ್ಳ ಸ್ಟಾಂಪುಗಳನ್ನು ಪಡೆಯಲು ಎಚ್ಚರದಿಂದ ಗಮನಿಸುತ್ತಿರಬೇಕು. ಇಂತಹ ಕೆಲವು ತಪ್ಪುಗಳು ಸ್ಟಾಂಪು ಇತಿಹಾಸವನ್ನೇ ಸೃಜಿಸಿವೆ. 'ಇನ್‌ವರ್ಟ್' ಸ್ಟಾಂಪಿನ ಮೂರು ಉದಾಹರಣೆಗಳು, ಸಂಗ್ರಹಕಾರನು ತನ್ನ ಸ್ಟಾಂಪುಗಳನ್ನು ಪರೀಕ್ಷಿಸುವುದು ಎಷ್ಟು ಮಹತ್ವಪೂರ್ಣವಾದದ್ದೆಂಬುದನ್ನು ಸೂಚಿಸುತ್ತದೆ.

'ಭಾರತೀಯ 4–ಆಣೆಯ ತಲೆಕೆಳಗು ತಲೆಯ' ಸ್ಟಾಂಪುಗಳು ಹೆಚ್ಚು ಮಹತ್ವಪೂರ್ಣವಾದದ್ದಾಗಿದೆ. 1854ರಲ್ಲಿ ಸರ್ವೇಯರ್ ಜನರಲ್ ಕಚೇರಿಯಲ್ಲಿ ಲಿಥೊಗ್ರಫಿಕ್ ವಿಧಾನದಿಂದ ಮುದ್ರಿಸಿದ ಮೊದಲ ಅಖಿಲ ಭಾರತ ಸ್ಟಾಂಪುಗಳಲ್ಲಿ ಇದೂ ಸೇರಿತ್ತು. ಈ ಸರಣಿಗಳಲ್ಲಿ 4–ಆಣೆಯ ಸ್ಟಾಂಪುಗಳನ್ನು ಮಾತ್ರ ಎರಡು ಬಣ್ಣದಲ್ಲಿ ಮುದ್ರಿಸಬೇಕಾಗಿತ್ತು. ಉಳಿದೆಲ್ಲಾ ಸ್ಟಾಂಪುಗಳೂ ಒಂದೇ ಬಣ್ಣದಲ್ಲಿದ್ದುವು. ಸ್ಟಾಂಪಿನ ಅಂಚನ್ನೂ ಮತ್ತು ತಲೆಯನ್ನೂ ಪ್ರತ್ಯೇಕ ಮುದ್ರಣಗಳಲ್ಲಿ ಛಾಪಿಸಬೇಕಾಗಿತ್ತು. ಮುದ್ರಣ ಸಮಯದಲ್ಲಿ, ತಲೆಯು ಅಂಚಿಗೆ ಹೋಲಿಸಿದಲ್ಲಿ ತಿರುಗುಮುರುಗಾಗಿ ಬಿದ್ದಿತ್ತು. ಆದರೆ, ಈ ತಪ್ಪು 1874ರ ವರೆಗೆ ಪತ್ತೆಯಾಗಲಿಲ್ಲ. 'ಭಾರತೀಯ 4–ಆಣೆಯ ತಲೆಕೆಳಗು ತಲೆಯ' ಈ ರೀತಿಯ 24 ಸ್ಟಾಂಪುಗಳು ಈಗಲೂ ಇವೆ. ಈಗ ಈ ರೀತಿಯ ಪ್ರತಿ ಸ್ಟಾಂಪಿನ ಬೆಲೆ 1,400 ಪೌಂಡ್‌ಗಳಿಗೂ (ರೂ. 25,200) ಹೆಚ್ಚಾಗಿದೆ.

1869ರಲ್ಲಿ ಅಮೆರಿಕ ಸಂಯುಕ್ತ ಸಂಸ್ಥಾನದಲ್ಲೂ ಇದೇ ರೀತಿಯ ತಪ್ಪನ್ನು ಮಾಡ ಲಾಯಿತು. ಆಗ, 1, 2, 3, 6, 10, 12, 15, 24, 30 ಮತ್ತು 90–ಸೆಂಟ್‌ಗಳ ಮೌಲ್ಯದ ಹತ್ತು ಸ್ಟಾಂಪುಗಳನ್ನು ಹೊರಡಿಸಲಾಯಿತು. ಕಡಿಮೆ ಮೌಲ್ಯದ ಸ್ಟಾಂಪುಗಳನ್ನು ಒಂದೇ ಬಣ್ಣ ದಲ್ಲಿ ಮುದ್ರಿಸಲಾಗಿತ್ತು. ಹೆಚ್ಚು ಮೌಲ್ಯದ ನಾಲ್ಕು ಸ್ಟಾಂಪುಗಳನ್ನು ಎರಡು ಬಣ್ಣಗಳಲ್ಲಿ ಮುದ್ರಿಸಲಾಯಿತು. ಸರ್ಕಾರೀ ಏಜೆಂಟನು ಇವುಗಳನ್ನು ಮಾರಾಟಮಾಡುತ್ತಿದ್ದಾಗ 15–ಸೆಂಟ್ ಮೌಲ್ಯದ ಸ್ಟಾಂಪುಗಳ ಒಂದು ಇಡೀ ಹಾಳೆಯಲ್ಲಿ, ಪ್ರತಿ ಸ್ಟಾಂಪಿನಲ್ಲೂ, ಮಧ್ಯದ ವಿನ್ಯಾಸವು ತಲೆಕೆಳಗಾಗಿ ಮುದ್ರಿತವಾಗಿದ್ದನ್ನು ಗಮನಿಸಿದ. 'ಕೊಲಂಬಸ್' ನೆಲದ ಮೇಲೆ ಇಳಿಯುತ್ತಿದ್ದ




24–ಸೆಂಟ್‌ಗಳ ಏರ್‌ಮೇಲ್ 'ಇನ್‌ವರ್ಟ್'.

ಚಿತ್ರವನ್ನು ಈ ವಿನ್ಯಾಸ ಒಳಗೊಂಡಿತ್ತು. ನಂತರದ ವರ್ಷಗಳಲ್ಲಿ 24–ಸೆಂಟ್‌ನ ಮತ್ತು 30–ಸೆಂಟ್‌ನ ಮೌಲ್ಯದ ಸ್ಟಾಂಪುಗಳಲ್ಲೂ ಇದೇ ದೋಷವಿದ್ದುದನ್ನು ಪತ್ತೆಹಚ್ಚಲಾಯಿತು ಉಪಯೋಗಿಸಲ್ಪಡದ ಈ ರೀತಿಯ ಸುಮಾರು ಎಂಟು 'ತಲೆಕೆಳಗು' ಸ್ಟಾಂಪುಗಳು ಈಗಲೂ ಇರುವುದು ಗೊತ್ತಾಗಿದೆ. ಈ ಪೈಕಿ 15–ಸೆಂಟ್ ಮೌಲ್ಯದ ಸ್ಟಾಂಪು ತುಂಬ ಅಪರೂಪವಾಗಿದ್ದು ಇಂತಹ ಪ್ರತಿ ಸ್ಟಾಂಪಿನ ಬೆಲೆ 16,000 ಪೌಂಡ್‌ಗಳು (ರೂ. 2,88,000). 30–ಸೆಂಟ್ ಸ್ಟಾಂಪಿನ ಬೆಲೆ ತಲಾ 7,500 ಪೌಂಡ್‌ಗಳು (ರೂ. 1,35,000). '24–ಸೆಂಟ್ ಇನ್‌ವರ್ಟ್' ಸ್ಟಾಂಪಿನ ಬೆಲೆ ತಲಾ 6,500 ಪೌಂಡ್‌ಗಳು (ರೂ. 1,17,000).

ತನ್ನ ಸ್ಟಾಂಪುಗಳನ್ನು ಜಾಗರೂಕತೆಯಿಂದ ಪರಿಶೀಲಿಸದ ಸಂಗ್ರಹಕಾರನು ದೊಡ್ಡ ಸಂಪತ್ತನ್ನೇ ಕಳೆದುಕೊಳ್ಳಬಹುದು. 'ಯೂಎಸ್‌ಎ 24–ಸೆಂಟ್ಸ್ ಏರ್ ಮೇಲ್ ಇನ್‌ವರ್ಟ್' ಸ್ಟಾಂಪಿನ ದೋಷವನ್ನು ಮೊದಲು ಗಮನಿಸಿದ ಶ್ರೀ ಡಬ್ಲ್ಯೂ. ಟಿ. ರೂಬೆಯುಷ್ಪೇ, ಪ್ರತಿ ಸಂಗ್ರಹಕಾರನೂ ಎಚ್ಚರದಿಂದಿರಬೇಕು. ಅಮೆರಿಕ ಸಂಯುಕ್ತ ಸಂಸ್ಥಾನದ ಅಂಚೆ ಕಚೇರಿಯು 1918ನೇ ಮೇ 13ನೇ ತಾರೀಖು 24–ಸೆಂಟ್‌ನ ಹೊಸ ಏರ್ ಮೇಲ್ ಸ್ಟಾಂಪನ್ನು ಹೊರಡಿಸಿತು. ಹಾರಾಟ ನಡೆಸುತ್ತಿದ್ದ ವಿಮಾನದ ಚಕ್ರವನ್ನು ವಿನ್ಯಾಸವು ಒಳಗೊಂಡಿದ್ದು, ಅದನ್ನು ಎರಡು ಬಣ್ಣದಲ್ಲಿ ಮುದ್ರಿಸಲಾಗಿತ್ತು. ವಾಷಿಂಗ್‌ಟನ್‌ನ ಉತ್ಸಾಹೀ ಸ್ಟಾಂಪು ಸಂಗ್ರಹಕಾರನಾದ ಶ್ರೀ ರೂಬೆ, ಹತ್ತಿರದ ಅಂಚೆ ಕಚೇರಿಯಿಂದ ಒಂದು ಹಾಳೆಯಷ್ಟು ಸ್ಟಾಂಪುಗಳನ್ನು ಕೊಂಡನು. ತಾನು ಕೊಂಡ ಹಾಳೆಯಲ್ಲಿನ ಸ್ಟಾಂಪುಗಳಲ್ಲಿ, ಮಧ್ಯದಲ್ಲಿದ್ದ ವಿಮಾನ ತಲೆಕೆಳಗಾಗಿ ಬಿದ್ದುದನ್ನು ಕಂಡು ಅವನು ಆಶ್ಚರ್ಯಚಕಿತನಾದನು. ಆ ಹಾಳೆ ಒಂದು ಅಪರೂಪದ ವಸ್ತುವಾಗಿತ್ತು. ಒಂದು ವಾರದ ನಂತರ ಅವನು ಆ ಹಾಳೆಯನ್ನು 15.000 ಡಾಲರ್‌ಗಳಿಗೆ (ರೂ. 1,10,000) ಮಾರಿದನು. ನಂತರ ಅದು ಹಸ್ತ ಬದಲಾಯಿಸಲ್ಪಟ್ಟು 20,000 ಡಾಲರ್‌ಗಳಿಗೆ (ರೂ. 1,47,000) ಮಾರಾಟವಾಯಿತು. ಅನಂತರ ಕರ್ನಲ್ ಗ್ರೀನ್ ಎಂಬುವನು ಈ ಸ್ಟಾಂಪುಗಳನ್ನು ಒಟ್ಟೊಟ್ಟಾಗಿ ಮತ್ತು ಬಿಡಿಬಿಡಿಯಾಗಿ ಮಾರಾಟ ಮಾಡಿದನು. 1940ರಲ್ಲಿ ಇಂತಹ ಒಂದು ಸ್ಟಾಂಪಿನ ಬೆಲೆ 4,100 ಡಾಲರ್‌ಗಳಾಗಿತ್ತು (ರೂ.30,200).

ಅಂಚೆ ಸ್ಟಾಂಪು ಸಂಗ್ರಹಣೆಯು ಎಷ್ಟೊಂದು ಉತ್ತೇಜಕ ಹವ್ಯಾಸವೆಂಬ ಬಗ್ಗೆ ಈಗ ನಿಮಗೊಂದು ಅಭಿಪ್ರಾಯ ಬಂದಿರಬಹುದು. ಕೆಲವು ವೇಳೆ ಅದು ಅನಿರೀಕ್ಷಿತವಾಗಿ ಲಾಭದಾಯಕವೂ ಆಗಬಹುದು. ನಿಮ್ಮ ಸಂಗ್ರಹದಲ್ಲಿರುವ ಸ್ಟಾಂಪೊಂದು, ಒಂದು ದಿನ ಅತ್ಯಮೂಲ್ಯ ಆಗಬಹುದು. ಆದರೆ ಎಲ್ಲಕ್ಕಿಂತ ಮಿಗಿಲಾಗಿ, ಸ್ಟಾಂಪ್–ಸಂಗ್ರಹಣೆಯು ಇತರ ದೇಶಗಳ ಬಗ್ಗೆ ನಿಮಗೆ ಅಪಾರ ತಿಳಿವನ್ನು ನೀಡುತ್ತದೆ. ಈ ಆಕರ್ಷಕ ಹವ್ಯಾಸವು, ಸಂತೋಷದಾಯಕವಾಗಿ ಕಾಲ ಕಳೆಯಲು ಸಹಾಯಕಾರಿಯಾಗುವುದಲ್ಲದೆ, ವಿವಿಧ ವಿಷಯಗಳ ಬಗ್ಗೆ ಉಪಯುಕ್ತ ಸಮಾಚಾರವನ್ನು ಸಂಗ್ರಹಿಸುವಲ್ಲಿ ನೆರವನ್ನೂ ನೀಡುತ್ತದೆ. ಸ್ಟಾಂಪುಗಳ ಆಲ್ಬಮ್, ಸಂಗ್ರಹಕಾರರಿಗೆ, ಅನೇಕ ವಿಷಯಗಳ ಪರಿಚಯ ಮಾಡಿಕೊಡುವ ಸಣ್ಣ ವಿಶ್ವಕೋಶವಾಗಿರಬಹುದು.




1889-1964


न.पै. 15 nP
Dr. RAJENDRA PRASAD
PRESIDENT OF INDIA
1950-1962
INDIA POSTAGE


DR RADHAKRISHNAN
15 पै P
भारत INDIA
PRESIDENT OF INDIA
भारत INDIA
पै. P 20


LALB HADUR SHASTRI
1904-1966
0.15 लालबहादुर शास्त्री
भारत INDIA


SRI AUROBINDO
श्री अरविन्द
0.15
1872-1950


भारत INDIA
15 पै P
HOMI BHABHA
1909-1966


भारत
INDIA
DEENABANDHU C.F. ANDREWS
20 पै. P.
1871
1940


20
भारत पै. P INDIA


20 पै. P
INDIA
बा-बापू BA-BAPU
गांधी शताब्दी GANDHI CENTENARY


20 P
भारत INDIA

# ಅಂಚೆ ಸ್ಟಾಂಪುಗಳಿಗೆ ಸಂಬಂಧಿಸಿದ ಶಬ್ದಕೋಶ

**ಅಧಿಸಿವ್:** ಅಂಟಿಸಲು ಸಾಧ್ಯವಾಗುವಂತೆ, ಹಿಂಭಾಗದಲ್ಲಿ ಅಂಟಿನಿಂದ ಲೇಪಿಸಲಾದ ಸ್ಟಾಂಪು.

**ಅಲ್ಬಿನೊ:** (ತಪ್ಪಿನಿಂದಾಗಿ) ಸ್ಟಾಂಪು ವಿನ್ಯಾಸದ ಯಾವುದೇ ಭಾಗ ಮಸಿಯನ್ನು ಹೊಂದಿಲ್ಲದಿರುವುದು—ಉಬ್ಬಚ್ಚುಳ್ಳ ಸ್ಟಾಂಪುಗಳಲ್ಲಿ ಇದು ಸಾಮಾನ್ಯ.

**ಬೈಸೆಕ್ಟ್ಸ್:** ಸರಿಯಾಗಿ ಅರ್ಧಕ್ಕೆ ಹರಿದ ಸ್ಟಾಂಪುಗಳು (ಸಾಮಾನ್ಯವಾಗಿ ಋಜುರೇಖೆಯಲ್ಲಿ)—ಅಂದರೆ 4-ಆಣೆಯ ಸ್ಟಾಂಪನ್ನು ಕತ್ತರಿಸಿ, 2-ಆಣೆಯ ಸ್ಟಾಂಪಿನಂತೆ ಉಪಯೋಗಿಸುವುದು.

ಜರೂರು ಪರಿಸ್ಥಿತಿಯ ಕಾಲದಲ್ಲಿ, ಅನೇಕ ದೇಶಗಳು, ಸ್ಟಾಂಪುಗಳನ್ನು ಈ ರೀತಿ ಉಪಯೋಗಿಸಲು ಅನುಮತಿ ನೀಡಿವೆ.

**ಬಿಷಪ್ ಮಾರ್ಕ್:** 1661ರಲ್ಲಿ ಹೆನ್ರಿ ಬಿಷಪ್ ಜಾರಿಗೆ ತಂದ ಪ್ರಖ್ಯಾತ ವರ್ತುಲಾಕಾರದ ಹ್ಯಾಂಡ್ ಸ್ಟಾಂಪಿನ ಗುರುತು.

**ಬ್ಲಾಕ್ ಆಫ್ ಸ್ಟಾಂಪ್ಸ್:** ಹರಿಯಲಾಗದಂತೆ ಒಟ್ಟಿಗೆ ಸೇರಿದ ನಾಲ್ಕು ಅಥವ ಅದಕ್ಕೂ ಹೆಚ್ಚು ಸ್ಟಾಂಪುಗಳ ತಂಡ.

**ಕಾಷೆ:** ಮೊದಲ ದಿನದ ಲಕೋಟೆ, ವಿಶೇಷ ಸಾಹಸಯಾತ್ರೆ. ವಿಶೇಷ ವಿಮಾನ ಹಾರಾಟ—ಮೊದಲಾದ ವಿಶೇಷ ಸಂದರ್ಭಗಳನ್ನು ಅಂಚೆಯ ಮೇಲೆ ಸೂಚಿಸುವ ಗುರುತು.

**ಕ್ಯಾನ್ಸಲೇಷನ್:** ಸ್ಟಾಂಪನ್ನು ಬಳಸಲಾಗಿದೆಯೆಂಬುದನ್ನು ಸೂಚಿಸುವ, ಸ್ಟಾಂಪಿನ ಮೇಲೆ ಒತ್ತಿದ ಮುದ್ರೆ. ಅವು ಅಂಚೆ ಗುರುತಾಗಿರಬಹುದು. ಪೆನ್ನಿನ ಗುರುತಾಗಿರಬಹುದು. 'ಮಾದರಿ' ಎಂಬಂತಹ ಪದಗಳಾಗಿರಬಹುದು, ರಂಧ್ರಗಳ ಗುರುತಾಗಿರಬಹುದು ಇತ್ಯಾದಿ.

**ಸೆಂಟರ್ಡ್:** ನಾಲ್ಕು ಅಂಚುಗಳಿಂದಲೂ ಸಮಾನ ದೂರದಲ್ಲಿರುವಂತೆ ಸ್ಟಾಂಪಿನ ಮೇಲೆ ರಚಿಸಿರುವ ವಿನ್ಯಾಸ. ಈ ರೀತಿಯ ಹೊಂದಾಣಿಕೆಯಿಲ್ಲದ ವಿನ್ಯಾಸವುಳ್ಳ ಸ್ಟಾಂಪಿನ ಮೌಲ್ಯ. ಸಾಮಾನ್ಯವಾಗಿ ಹೆಚ್ಚಾಗಿರುತ್ತದೆ.

**ಕಾಯಿಲ್ ಸ್ಟಾಂಪ್:** (ಸಾಮಾನ್ಯವಾಗಿ ಅಂಚೆಕಚೇರಿಗಳ ಹೊರಗೆ) ಸ್ವಯಂ ಯಂತ್ರದ ಕಾರ್ಯಾಚರಣೆಗೆ ಸಿದ್ಧವಾದ ಮಾರಾಟದ ಸ್ಟಾಂಪುಗಳು. ಇವನ್ನು ಒಂದೆಗೆರೆಯಲ್ಲಿ ಸುತ್ತಿರಲಾಗುವುದು. ಅವು ಜಲ ಚಿಹ್ನೆಯನ್ನು ಸಾಮಾನ್ಯವಾಗಿ ಪಕ್ಕದಲ್ಲಿ ಹೊಂದಿರುತ್ತವೆ. ಇವನ್ನು 'ಸುರುಳಿ'ಗಳೆಂದೂ ಕರೆಯಲಾಗುವುದು.

**ಕಾಂಬಿನೇಷನ್ ಕವರ್:** ಒಂದು ಲಕೋಟೆಯ ಮೇಲೆ ಒಂದಕ್ಕಿಂತ ಹೆಚ್ಚು ದೇಶಗಳ ಸ್ಟಾಂಪಿರುವುದು.

**ಕವರ್:** ಸ್ಟಾಂಪನ್ನು ಒಳಗೊಂಡ ಲಕೋಟೆ, ಇಲ್ಲವೆ ಹಾಳೆ.

**ಡೆಫಿನಿಟಿವ್ ಇಷ್ಯೂ:** ಸ್ಮಾರಕ, ಸಹಾಯಾರ್ಥ ಮುಂತಾದ ಸಂದರ್ಭಗಳಿಗಲ್ಲದೆ. ದೇಶವೊಂದು ಹೊರಡಿಸಿದ ನಿಯತ ಸ್ಟಾಂಪುಗಳು.

**ಡೈ:** ವಿನ್ಯಾಸವನ್ನು ಕೆತ್ತಿದ ಮೂಲ ಲೋಹದ ಫಲಕ. ಇದನ್ನು ಕೆಲವು ಸಲ 'ಮಾಸ್ಟರ್-ಡೈ' ಎಂದೂ ಕರೆಯಲಾಗುವುದು. ವಿನ್ಯಾಸದ ನಕಲು ಪ್ರತಿಗಳನ್ನು ಲೋಹದ ಹಾಳೆಗಳ ಮೇಲೆ ತೆಗೆಯಲು ಇದನ್ನು ಬಳಸಲಾಗುವುದು. ಈ ನಕಲುಗಳಿಂದ ಸ್ಟಾಂಪುಗಳನ್ನು ಮುದ್ರಿಸಲಾಗುವುದು.

**ಎಂಟೈಯರ್:** ಸ್ಟಾಂಪನ್ನೊಳಗೊಂಡ ಸಂಪೂರ್ಣ ಲಕೋಟೆ. ಪೋಸ್ಟ್ ಕಾರ್ಡ್ ಇಲ್ಲವೆ ಹಾಳೆ.

**ಎರ್ರರ್:** ಸಾಮಾನ್ಯವಾದ ಸ್ಟಾಂಪುಗಳಿಗೆ ಹೋಲಿಸಿದಲ್ಲಿ, ಕೆಲವು ಸ್ಟಾಂಪಿನ ಮೇಲೆ ಕಾಣಬರುವ ದೋಷ.

**ಎಸ್ಸೇಸ್:** ಬಳಕೆಯ ಸಲುವಾಗಿ ಸಲ್ಲಿಸಲ್ಪಟ್ಟ ಸ್ಟಾಂಪಿನ ವಿನ್ಯಾಸ. ಆದರೆ ಅಂತಿಮವಾಗಿ ಅದನ್ನು ಅಂಗೀಕರಿಸಿರುವುದಿಲ್ಲ.

**ಫಸ್ಟ್-ಡೇ-ಕವರ್:** ಸ್ಟಾಂಪಿನ ಮಾರಾಟದ ಮೊದಲ ದಿನದಂದು ಬಳಸಿದ ಸ್ಟಾಂಪು ಮತ್ತು ಅಂಚೆ ಗುರುತುಳ್ಳ ಲಕೋಟೆ.

**ಫಿಸ್ಕಲ್:** ಅಂಚೆಯೇತರ ತೆರಿಗೆಗಳನ್ನು ಸಂಗ್ರಹಿಸಲು ಬಳಸಿದ ಸ್ಟಾಂಪು.

**ಇಂಪರ್ಫೂರೇಟ್:** ಅಂಚಿನಲ್ಲಿ ರಂಧ್ರಗಳನ್ನು ಹೊಂದಿಲ್ಲದ ಸ್ಟಾಂಪುಗಳು. ಇವನ್ನು ಹಾಳೆಯಿಂದ ಕತ್ತರಿಸಿ ತೆಗೆಯುವುದು ಅಗತ್ಯ.

**ಇನ್‌ವರ್ಟೆಡ್:** ವಿನ್ಯಾಸವು ತಲೆಕೆಳಗಾಗಿ ಬಿದ್ದಿರುವುದು. ಅಂದರೆ, ರಾಜನ ತಲೆಯಾಗಲೀ, ಸ್ಟಾಂಪಿನ ಮೌಲ್ಯವನ್ನು ಸೂಚಿಸುವ ಅಂಕಿಗಳಾಗಲೀ ತಲೆ ಕೆಳಗಾಗಿ ಬಿದ್ದಿರುವುದು.

**ಕಿಲ್ಲರ್:** ಅಪಾರ ಸಂಖ್ಯೆಯಲ್ಲಿ ಸ್ಟಾಂಪುಗಳನ್ನು ನಾಶಪಡಿಸುವುದು.

**ಮಿನಿಯೇಚರ್ ಷೀಟ್:** ವಿಶೇಷವಾಗಿ ಉತ್ಪಾದಿಸಲ್ಪಟ್ಟ ಸ್ಟಾಂಪು ಹಾಳೆಗಳು. ಸಾಮಾನ್ಯವಾಗಿ, ಸ್ಮಾರಕದ ಸಲುವಾಗಿ ಛಾಪಿಸಿದ ಒಂದೇ ಒಂದು ಸ್ಟಾಂಪುಳ್ಳ ಹಾಳೆ.

**ಮಿಂಟ್:** ಸುವ್ಯವಸ್ಥಿತವಾದ ರೀತಿಯಲ್ಲಿ ಅಂಟಿನಿಂದ ಕೂಡಿದ ಸ್ಟಾಂಪು.

**ಮಲ್‌ರೆಡಿ:** 1840ರಲ್ಲಿ ಗ್ರೇಟ್ ಬ್ರಿಟನ್ನಿನಲ್ಲಿ ಹೊರಡಿಸಿದ, ಮುಂದಾಗಿ ಹಣ ಪಾವತಿಯಾಗಿದ್ದ, ಮೊದಲ ದಿನದ ಲಕೋಟೆ. ಇದರ ವಿನ್ಯಾಸದ ರಚನಾಕಾರರು, ವಿಲಿಯಂ ಮಲ್‌ರೆಡಿ.

**ಓವರ್‌ಪ್ರಿಂಟ್:** ಸ್ಟಾಂಪಿನ ಮೂಲ ಮುದ್ರಣದ ನಂತರ ಅದರ ಮೇಲೆ ಹಾಕಿರುವ ಗುರುತು. ಅದರ ಮುಖ ಬೆಲೆಯನ್ನು ಬದಲಿಸುವಂತಹ ಗುರುತನ್ನು ಸೂಚಿಸಲು ಅನೇಕ ಸಂಗ್ರಹಕಾರರು ಈ ಪದವನ್ನು ಬಳಸುವರು. ಇದರಿಂದ 'ಸರ್‌ಛಾರ್ಜ್' ಪದವೂ, ಇದಕ್ಕೂ ಇರುವ ವ್ಯತ್ಯಾಸವನ್ನು ಅರಿಯುವುದು ಸಾಧ್ಯ.

**ಪರ್‌ಫೊರೇಷನ್:** ಯಂತ್ರದ ಮೂಲಕ ಸ್ಟಾಂಪಿನ ಅಂಚಿನಲ್ಲಿ ರಂಧ್ರಗಳನ್ನು ಕೊರೆಯುವುದು. ಇದರಿಂದ ಸ್ಟಾಂಪುಗಳ ನಡುವೆ ಸಣ್ಣ ರಂಧ್ರಗಳಿದ್ದು, ಸ್ಟಾಂಪನ್ನು ಪ್ರತ್ಯೇಕಿಸುವುದು ಸುಲಭ. ರಂಧ್ರಗಳಾಗದಂತೆ ಸಾಲು ಗುರುತು ಮಾಡಿದಲ್ಲಿ, ರಂಧ್ರದ ಕಾಗದ ಹೊರಬಂದಿರುವುದಿಲ್ಲ. ಆಗ ಸ್ಟಾಂಪಿನ ಅಂಚನ್ನು ಕತ್ತರಿಸಿ ಬೇರ್ಪಡಿಸಬೇಕಾಗುತ್ತದೆ. 2-ಸೆಂಟಿ ಮೀಟರ್ ಉದ್ದದಲ್ಲಿ ಬಿದ್ದಿರುವ ರಂಧ್ರಗಳ ಸಂಖ್ಯೆಯಿಂದ, ರಂಧ್ರದ ವ್ಯಾಪ್ತಿಯನ್ನು ಗುರುತಿಸಬಹುದು. 12½ ರಂಧ್ರಗಳು, 15-ರಂಧ್ರಗಳು ಇತ್ಯಾದಿ ಎಂಬುದಾಗಿ ಹೇಳಿದಲ್ಲಿ, 2-ಸೆಂಟಿ ಮೀಟರ್ ಉದ್ದದಲ್ಲಿ ಇಷ್ಟು ರಂಧ್ರಗಳಿವೆಯೆಂಬ ಅರ್ಥ ಬರುತ್ತದೆ.

**ಫಿಲಾಟೆಲಿಕ್ ಬ್ಯೂರೊ:** ಸ್ಟಾಂಪು ಸಂಗ್ರಹಕಾರರೊಡನೆ ವ್ಯವಹರಿಸಲು, ವಿವಿಧ ಸರ್ಕಾರಗಳು ರಚಿಸಿರುವ ಸ್ಟಾಂಪು ಸಮಾಚಾರ ಸಂಸ್ಥೆಗಳು. ಇವನ್ನು ಅಂಚೆ ಕಚೇರಿಗಳೊಡನೆ ಸೇರಿಸಲಾಗಿರುತ್ತದೆ.

**ಪ್ಲೇಟ್ ನಂಬರ್ಸ್:** ಕೆಲವು ದೇಶಗಳು ಹೊರಡಿಸಿರುವ ಸ್ಟಾಂಪುಗಳ ಅಂಚಿನಲ್ಲಿ ಕಾಣುವ ಮುದ್ರಣ ಹಾಳೆಗಳ ಸರಣಿಯನ್ನು ಸೂಚಿಸುವ ಅಂಕಿಗಳು. ಗ್ರೇಟ್ ಬ್ರಿಟನ್ನಿನಲ್ಲಿ 1858ರಿಂದ 1880ರ ವರೆಗೆ ಹೊರಡಿಸಿದ ಸ್ಟಾಂಪುಗಳ ಎಲ್ಲ ಸರಣಿಯೂ ಸೇರಿದಂತೆ, ಕೆಲವು ಸ್ಟಾಂಪುಗಳ ವಿಷಯದಲ್ಲಿ, ಹಾಳೆಯ ಸಂಖ್ಯೆಗಳು ಸ್ಟಾಂಪಿನ ಮೇಲೂ ಬಿದ್ದಿರುತ್ತವೆ.

**ಪೋಸ್ಟಲ್ ಹಿಸ್ಟರಿ:** ಸಂದೇಶಗಳ ವಿನಿಮಯದ ಪ್ರಾರಂಭದಿಂದಲೂ ರೂಪುಗೊಂಡ ಅಂಚೆ ವ್ಯವಸ್ಥೆಯ ಬಗ್ಗೆ ತಿಳಿಯಪಡಿಸುವ ಸಮಾಚಾರಗಳು. ಅಂಚೆ ಇತಿ

ಹಾಸದ ಅಧ್ಯಯನಕಾರನೊಬ್ಬನು, ಅಂಚೆ ಸಂಗ್ರಹಕಾರನಾಗಿರಬೇಕಾದ ಅಗತ್ಯವಿಲ್ಲ.

**ಪೋಸ್ಟಲ್ ಸ್ಟೇಷನರಿ:** ಸ್ಟಾಂಪುಗಳನ್ನುಳ್ಳ ಇಲ್ಲವೆ ಸ್ಟಾಂಪಿನ ಉಬ್ಬಚ್ಚುಗಳಿಂದ ಕೂಡಿದ ಲಕೋಟೆಗಳು, ಅಂಚೆ ಕಾರ್ಡುಗಳು ಮತ್ತು ಹಾಳೆಗಳು.

**ಕ್ವಡ್ರಿಲ್:** ಸಣ್ಣ ಚೌಕಗಳ ರೂಪ ಬರುವಂತೆ ಉದ್ದ ಮತ್ತು ಅಡ್ಡನೆಯ ಗೀರುಗಳಿಂದ ಕೂಡಿದ ಜಲ ಚಿಹ್ನೆ ಇಲ್ಲವೆ ಮುದ್ರಣ.

**ರೂಲೆಟ್:** ಸ್ಟಾಂಪುಗಳನ್ನು ಪ್ರತ್ಯೇಕಿಸಲು ಹಾಳೆಯ ಮೇಲೆ ರಂಧ್ರ ಕೊರೆಯುವ ಬದಲು ಮಾಡುವ ಸಾಲು ಗುರುತು.

**ಸೆ-ಟನೆಂಟ್:** ವಿವಿಧ ವಿನ್ಯಾಸ ಅಥವ ಬಣ್ಣಗಳ ಎರಡು ಸ್ಟಾಂಪುಗಳನ್ನು ಅಕ್ಕಪಕ್ಕದಲ್ಲಿ ಅಂಟಿಸಿರುವುದು.

**ಟೀಟ್-ಬೇಷ್:** ಅಕ್ಕಪಕ್ಕದಲ್ಲಿ ಸೇರಿರುವ ಎರಡು ಸ್ಟಾಂಪುಗಳು. ಇದರಲ್ಲೊಂದು ತಲೆ ಕೆಳಗಾಗಿರುತ್ತದೆ.

**ವಿನ್ನೆಟ್:** ಸ್ಟಾಂಪಿನ ಮೇಲೆ ಕಾಣುವ ಮಧ್ಯದ ಚಿತ್ರ ಇಲ್ಲವೆ ಮುಖ್ಯ ವಿನ್ಯಾಸ.

**ವಾಟರ್‌ಮಾರ್ಕ್:** ತಯಾರಿಕೆಯ ಹಂತದಲ್ಲಿ ಕಾಗದದ ಮೇಲೆ ಗುರುತು ಮಾಡುವ ಜಲ ಚಿಹ್ನೆ.

ಪ್ರತಿ ದೇಶ ಹಾಗೂ ಅಂಚೆ ಆಡಳಿತ ವ್ಯವಸ್ಥೆಯು ತನ್ನ ಮೊದಲ ಅಂಚೆ ಸ್ಟಾಂಪನ್ನು ಎಂದು ಹೊರಡಿಸಿತೆಂಬುದನ್ನು ತಿಳಿಯುವುದು ಆಸಕ್ತಿಯುತ ಅಂಶವಾಗಿದೆ. ಸ್ಟಾಂಪು ಸಂಗ್ರಹಕಾರರ ಪ್ರಯೋಜನದ ಸಲುವಾಗಿ, ಈ ಸಮಾಚಾರವನ್ನು ನೀಡುವ ಪಟ್ಟಿಯನ್ನು ಈ ಕೆಳಗೆ ಕೊಡಲಾಗಿದೆ:

**1840** ಗ್ರೇಟ್ ಬ್ರಿಟನ್

**1843** ಬ್ರೆಜಿಲ್, ಜಿನಿವಾ, ಜೂರಿಚ್

**1845** ಬಾಸೆಲ್, ಅಮೆರಿಕ ಸಂಯುಕ್ತ ಸಂಸ್ಥಾನ (ಪೋಸ್ಟ್ ಮಾಸ್ಟರ್‌ಗಳು)

**1847** ಮಾರಿಷಸ್, ಅಮೆರಿಕ ಸಂಯುಕ್ತ ಸಂಸ್ಥಾನ (ಸರ್ಕಾರ), ಟ್ರಿನಿಡಾಡ್

**1848** ಬರ್‌ಮೂಡ

**1849** ಬವೇರಿಯಾ, ಬೆಲ್ಜಿಯಂ, ಫ್ರಾನ್ಸ್

**1850** ಆಸ್ಟ್ರಿಯ, ಬ್ರಿಟಿಷ್ ಗಯಾನಾ, ಹನೋವರ್, ನ್ಯೂ ಸೌತ್ ವೇಲ್ಸ್, ಪ್ರಷ್ಯ, ಸಾಕ್ಸೋನಿ, ಷೆಲ್‌ವಿಗ್–ಹಾಲ್‌ಸ್ಟೀನ್, ಸ್ಪೇನ್, ಸ್ವಿಟ್‌ಜರ್‌ಲೆಂಡ್, ವಿಕ್ಟೋರಿಯ

**1851** ಬಡೆನ್, ಕೆನಡ, ಡೆನ್ಮಾರ್ಕ್, ಹವಾಯ್ ದ್ವೀಪಗಳು, ನ್ಯೂ ಬ್ರನ್ಸ್‌ವಿಕ್, ಸಾರ್ಡೀನಿಯ, ಟಸ್ಕನಿ, ವರ್ಟೆಂಬರ್ಗ್

**1852** ಬಾರ್ಬೊಡಾಸ್, ಬ್ರನ್ಸ್‌ವಿಕ್, ನೆದರ್ಲೆಂಡ್ಸ್, ಭಾರತ, ಲುಕ್ಸೆಂಬರ್ಗ್, ಮೊದೆನ, ಓಲ್ಡೆನ್‌ಬರ್ಗ್, ಪಾರ್ಮ, ರೀಯೂನಿಯನ್, ರೋಮನ್ ಸ್ಟೇಟ್ಸ್, ಥರ್ನ್ ಮತ್ತು ಟ್ಯಾಕ್ಸಿಸ್

**1853** ಕೆಪ್ ಆಫ್ ಗುಡ್‌ಹೋಪ್, ಚಿಲಿ, ನೊವಸ್ಕಾಟಿಯ, ಪೋರ್ಚುಗಲ್, ಟಾಸ್‌ಮೇನಿಯ.

**1854** ಫಿಲಿಪ್ಪೈನ್ಸ್ ದ್ವೀಪಗಳು, ಪಶ್ಚಿಮ ಆಸ್ಟ್ರೇಲಿಯ

**1855** ಬ್ರೆಮನ್, ಕೊರ್ರಿಯೆಂಟಿಸ್, ಕ್ಯೂಬ ಮತ್ತು ಪೋರ್ಟೊರಿಕೊ, ಡೇನಿಷ್ ವೆಸ್ಟ್ ಇಂಡೀಸ್, ನ್ಯೂಜಿಲೆಂಡ್, ನಾರ್ವೆ, ಸೌತ್ ಆಸ್ಟ್ರೇಲಿಯ, ಸ್ವೀಡನ್

**1856** ಫಿನ್‌ಲೆಂಡ್, ಮೆಕ್ಲೆನ್‌ಬರ್ಗ್-ಶ್ವೆರಿನ್, ಮೆಕ್ಸಿಕೊ, ಸೇಂಟ್ ಹೆಲೆನ, ಉರುಗ್ವೆ

1857 ಶ್ರೀಲಂಕಾ, ನಟಾಲ್, ನ್ಯೂಫೌಂಡ್‌ಲ್ಯಾಂಡ್, ಪೆರು

1858 ಅರ್ಜಂಟೈನಾ ಗಣರಾಜ್ಯ, ಬ್ಯೂನಸ್ ಐರೆಸ್, ಕೊಡೊರ್ಬಾ, ನೇಪಲ್ಸ್, ಮೊಲ್ಡೇವಿಯ, ಪೆರು, ರಷ್ಯ

1859 ಬಹಾಮಾಸ್, ಕೊಲಂಬಿಯ ಗಣರಾಜ್ಯ, ಫ್ರೆಂಚ್ ಕಾಲೊನಿಗಳು, ಹ್ಯಾಂಬರ್ಗ್, ಐಯೋನಿಯನ್ ದ್ವೀಪಗಳು, ಲ್ಯೂಬೆಕ್, ರೊಮಾಗ್ನ, ಸಿಸಿಲಿ, ವೆನಿಜೂಲ, ಸಿಯಾರಾ ಲಿಯೋನ್

1860 ಜಮೈಕ, ಲೈಬೀರಿಯ, ಮಾಲ್ಟಾ, ನ್ಯೂಕ್ಯಾಲೆಡೋನಿಯ, ಕ್ವೀನ್‌ಲ್ಯಾಂಡ್, ಸೆಂಟ್ ಲೂಸಿಯ, ಪೋಲೆಂಡ್, ಬ್ರಿಟಿಷ್ ಕೊಲಂಬಿಯ ಮತ್ತು ವ್ಯಾಂಕೂವರ್ ದ್ವೀಪಗಳು

1861 ಬೆರ್ಗಡೊರ್ಫ್, ಕಾನ್‌ಫೆಡರೇಟ್‌ರಾಜ್ಯಗಳು, ಗ್ರೀಸ್, ಗ್ರೆನೆಡ, ನೀಪಾಲಿಟನ್ ಪ್ರಾಂತಗಳು, ನೆವಿಸ್, ಪ್ರಿನ್ಸ್ ಎಡ್ವರ್ಡ್ ದ್ವೀಪ, ಸೇಂಟ್ ವಿನ್‌ಸೆಂಟ್, ಫಾಕ್ ದ್ವೀಪಗಳು

1862 ಆ್ಯಂಟಿಗುವ, ಹಾಂಗ್‌ಕಾಂಗ್, ಇಟಲಿ (ಪ್ರಭುತ್ವ), ನಿಕರಾಗುವ

1863 ಬೊಲಿವ, ತುರ್ಕಿ ಚಕ್ರಾಧಿಪತ್ಯ (ರಷ್ಯದ ಅಂಚೆ ಕಚೇರಿಗಳು), ಕೋಸ್ಟಾರಿಕಾ, ತುರ್ಕಿ, ವೆಂಡೆನ್.

1864 ಡಚ್ ಇಂಡೀಸ್, ಹಾಲ್‌ಸ್ಟೀನ್, ಮೆಕ್ಲೆನ್ ಬರ್ಗ್-ಸ್ಟ್ರೆಲಿಟ್ಸ್, ಸೊರುತ್ ಸ್ಕೆಲ್ಸ್‌ವಿಗ್

1865 ಡೊಮಿನಿಕನ್ ಗಣರಾಜ್ಯ, ಈಕ್ವೆಡರ್, ರುಮೇನಿಯ, ಷಾಂಘೈ

1866 ಬೊಲಿವಿಯ, ಬ್ರಿಟಿಷ್ ಹೊಂಡುರಾಸ್, ಈಜಿಪ್ಟ್, ಹೊಂಡುರಾಸ್, ಜಮ್ಮು ಮತ್ತು ಕಾಶ್ಮೀರ, ಸರ್ಬಿಯ, ವರ್ಜಿನ್ ದ್ವೀಪಗಳು

1867 ಚಿಯಪಸ್, ಗೌದಲ್‌ಜರಾ, ಹೆಲಿಗೊಲ್ಯಾಂಡ್, ತುರ್ಕಿ ಚಕ್ರಾಧಿಪತ್ಯ (ಆಸ್ಟ್ರಿಯಾದ ಅಂಚೆ ಕಚೇರಿಗಳು), ಸಲ್ವಡಾರ್, ಸ್ಟ್ರೈಟ್ ಸೆಟಲ್‌ಮೆಂಟ್ಸ್, ಟರ್ಕ್ಸ್ ದ್ವೀಪಗಳು

1868 ಆ್ಯಂಟಿಕ್ವಿಯಾ, ಅಜೋರ್ಸ್, ಫರ್ನಾಂಡೊ ಪೂ, ಮಡೈರಾ,ಉತ್ತರ ಜರ್ಮನ್ ಕನ್‌ಫೆಡರೇಶನ್, ಆರೆಂಜ್ ರಿವರ್ ಕಾಲೊನಿ (ಓ.ಎಫ್.ಎಸ್.), ಪರ್ಷಿಯ

1869 ಗಾಂಬಿಯ, ಹೈದರಾಬಾದ್, ಸರ್ವಾಕ್, ಟ್ರಾನ್ಸ್‌ವಾಲ್ (ಎಸ್.ಎ.ಆರ್.)

1870 ಆಫ್‌ಘಾನಿಸ್ತಾನ್, ಆಲ್ಸೆಸ್ ಲೊರೇನ್, ಅಂಗೋಲಾ, ಕುಂದಿನಾಮರ್ಕ, ಫಿಜಿ, ಪೆರುಗ್ವೆ, ಸೇಂಟ್ ಕ್ರಿಸ್ಟೋಫರ್, ಟೊಲಿಮಾ, ಸೇಂಟ್ ಥಾಮಸ್ ಮತ್ತು ಪ್ರಿನ್ಸ್ ದ್ವೀಪಗಳು

1871 ಗ್ವಾಟೆಮಾಲ, ಹಂಗರಿ, ಜಪಾನ್

1872 ಜರ್ಮನಿ

1873 ಕ್ಯೂಬ, ಕ್ಯುರಾಕೊ, ಐಸ್‌ಲ್ಯಾಂಡ್, ಪೂರಿಟೊ ರಿಕೊ (ಸ್ಪೇನಿಷ್), ಸುರಿನಾಮ್

1874 ಡೊಮಿನಿಕ, ಗ್ರಿಕ್ವಲ್ಯಾಂಡ್, ಜಿಂದ್, ಲಾಗೋಸ್, ಮಾಂಟೆನೆಗ್ರೊ, ತುರ್ಕಿ ಚಕ್ರಾಧಿಪತ್ಯ (ಇಟಲಿಯ ಅಂಚೆ ಕಚೇರಿಗಳು)

1875 ಗೋಲ್ಡ್ ಕೋಸ್ಟ್

1876 ಭೂಪಾಲ್, ಮಾಂಟ್‌ಸೆರ್ರಾಟ್, ಪೂಂಚ್, ಜೋಹೊರ್, ಕ್ಯಾಂಪೆಚ್, ಮೊಜಾಂಬಿಕ್

1877 ಆಲ್ವಾರ್, ಕೆಪ್ ವರ್ಡ್, ನವನಗರ್, ಸಮೋವ, ಸಾನ್ ಮಾರಿನೊ

1878 ಹೊಂಡುರಾಸ್ ಚೀನ, ಪನಾಮ, ಪೆರಾಕ್ ಸುಂಗೆ ಉಜೊಂಗ್

1879 ಭೊರ್, ಬಾಸ್ನಿಯಾ ಮತ್ತು ಹೆರ್‌ಜೊಗೊವಿನಿಯ, ಬಲ್ಗೇರಿಯಾ, ಕೌಕಾ, ಫರೀದ್‌ಕೋಟ್, ಲಬುಆನ್, ಸಿರ್ಮೂರ್, ಟೊಬ್ಯಾಗೊ

1880 ಸೈಪ್ರಸ್, ಪೂರ್ವ ರುಮೇಲಿಯ, ರಾಜ್ ಪಿಪ್ಲಾ

1881 ಹೈತಿ, ನೇಪಾಳ್, ಪೋರ್ಚುಗೀಸ್ ಗಿನಿ, ಸೆಲಂಗೊರ್

1882 ಬ್ಯಾಂಕಾಕ್ (ಬ್ರಿಟಿಷ್ ಅಂಚೆ ಕಚೇರಿಗಳು), ತಹಿತಿ

1883 ಉತ್ತರ ಬೋರ್ನಿಯೋ, ಸಯಾಂ

1884 ಗ್ವಾಡಲೂಪ್, ಮಕಾವ್, ಮಡಗಾಸ್ಕರ್ (ಬಿ.ಸಿ.ಎನ್.), ಪಟಿಯಾಲ, ಸಂತಂದರ್, ಸ್ಟೆಲ್ಲಾಲ್ಯಾಂಡ್, ತುರ್ಕಿ ಚಕ್ರಾಧಿಪತ್ಯ (ಜರ್ಮನ್ ಅಂಚೆ ಕಚೇರಿಗಳು), ಕೊರಿಯ

1885 ಗ್ವಾನಕಾಸ್ತೆ, ಗ್ವಾಲಿಯರ್, ಮೊನಾಕೊ, ನಾಭಾ, ಸೇಂಟ್ ಪಿಯೆರ್ರೆ ಮತ್ತು ಮಿಕ್ವೆ-ಲೆನ್, ದಕ್ಷಿಣ ಬಲ್ಗೇರಿಯ, ತುರ್ಕಿ ಚಕ್ರಾ-ಧಿಪತ್ಯ (ಬ್ರಿಟಿಷ್ ಅಂಚೆ ಕಚೇರಿಗಳು), ತುರ್ಕಿ ಚಕ್ರಾಧಿಪತ್ಯ (ಫ್ರೆಂಚ್ ಅಂಚೆ ಕಚೇರಿಗಳು), ಬೆಚುನಾಲ್ಯಾಂಡ್

1886 ಚಂಬ, ಕೊಚಿನ್, ಬೆಲ್ಜಿಯನ್ ಕಾಂಗೊ, ಫ್ರೆಂಚ್ ಗಯಾನಾ, ಗ್ಯಬೂನ್, ಜಿಬ್ರಾ-ಲ್ಟರ್, ಮಾರ್ಟಿನಿಕ್, ನ್ಯೂ ರಿಪಬ್ಲಿಕ್ ಸೌತ್ ಆಫ್ರಿಕ, ಟೊಂಗಾ, ಇಂದೊರ್, ಟೈಮೂರ್

1887 ಝುಲವಾರ್, ಸೆನೆಗಲ್

1888 ಅನ್ನಾಮ್ ಮತ್ತು ಟಾಂಕ್ವಿನ್, ತಿರುವಾಂ-ಕೂರು, ಟ್ಯೂನೀಸಿಯ, ವಧ್ವಾನ್ ಜೂ-ಲೂಲ್ಯಾಂಡ್, ಬವಾಸ್ರಿ

1889 ಫ್ರೆಂಚ್ ಮಡಗಾಸ್ಕರ್, ಇಂಡೋಚೀಣ, ನಾಸ್ಸಿ ಬೇ, ಸ್ವಾಜಿಲ್ಯಾಂಡ್, ಪಹಾಂಗ್

1890 ಬ್ರಿಟಿಷ್ ಈಸ್ಟ್ ಆಫ್ರಿಕ, ಬ್ರಿಟಿಷ್ ಸೌತ್ ಆಫ್ರಿಕ (ರೊಡೇಸಿಯ), ಡೈಯಗೊ-ಸೌರೆಜ್, ಲೀವರ್ಡ್ ದ್ವೀಪಗಳು, ಸೀಶೆಲ್ಸ್

1891 ಫ್ರೆಂಚ್ ಕಾಂಗೊ, ಮೊರಾಕೊ (ಫ್ರೆಂಚ್ ಅಂಚೆ ಕಚೇರಿಗಳು), ನೆಗ್ರಿ ಸೆಂಗಿಲಾನ್, ನ್ಯಾಸಾಲ್ಯಾಂಡ್ ಪ್ರೊಟೆಕ್ಟೊರೇಟ್ (ಬಿ.ಸಿ.ಎ.), ಟಿಯಾರಾ–ದೆ–ಪ್ಯೂಗೊಲ್

1892 ಅಂಗ್ರಾ, ಅಂಜಾನಾ, ಬೆನಿನ್, ಕೊಚಿನ್, ಕುಕ್ ದ್ವೀಪಗಳು, ಫ್ರೆಂಚ್ ಗಿನಿಯ, ಫಂಚಲ್, ಹೊರ್ಟಾ, ಐವರಿ ಕೋಸ್ಟ್, ಮಯೊಟೆ, ಮೊಜಾಂಬಿಕ್ ಕಂ., ನೈಗರ್ ಕೋಸ್ಟ್ (ಆಯಿಲ್ ರಿವರ್ಸ್), ಓಬೊಕ್ ಓಷಿಯಾನಿಕ್ ಸೆಟಲ್‌ಮೆಂಟ್ಸ್, ಪೊಂಟಾ ಡೆಲ್ಗಡಾ, ರಾಜನಂದ ಗಾಂವ್

1893 ದುತ್ತಿಯಾ, ಎರಿಟ್ರಿಯಾ, ಟ್ಯಾಂಗನೀಕ (ಜ.ಇ.ಎ.), ಜಿಬೌತಿ

1894 ಅಬಿಸೀನಿಯ, ಬುಂದಿ, ಚರ್ಕಾರಿ, ಫ್ರೆಂಚ್ ಸೂಡಾನ್, ಲೌರೆಂಜೊ ಮಾರ್ಕ್ವೆಸ್, ಸ್ತೆ ಮಾರಿ ದೆ ಮಡಗಾಸ್ಕರ್, ಜಾಂಬೇಶಿಯ, ಜಾಂಜಿಬಾರ್ (ಫ್ರೆಂಚ್ ಅಂಚೆ ಕಚೇರಿಗಳು), ಪೋರ್ಚುಗೀಸ್ ಕಾಂಗೊ

1895 ಇನ್‌ಹ್ಯಾಂಬನೆ, ಬಸ್ಸಾಹಿರ್, ಉಗಾಂಡ, ಜಾಂಜಿಬಾರ್ (ಬ್ರಿಟಿಷ್)

1896 ಹೊಂಡ, ತುರ್ಕಿ ಚಕ್ರಾಧಿಪತ್ಯ (ರುಮೇನಿಯದ ಅಂಚೆ ಕಚೇರಿಗಳು), ಮಡಗಾ

ಸ್ಯುರ್ (ಫ್ರೆಂಚ್ ಅಂಚೆ ಕಚೇರಿಗಳು)

1897 ಕ್ಯಾಮರೂನ್ಸ್, ಚೀನಾ (ಜರ್ಮನ್ ಅಂಚೆ ಕಚೇರಿಗಳು), ಧಾರ್, ಜರ್ಮನ್ ಸೌತ್ ವೆಸ್ಟ್ ಆಫ್ರಿಕ, ಗ್ರ್ಯಾಂಡ್ ಕೊಮೆರೊ, ಲಾಸ್ ಬೆಲ, ಮಾರ್ಷಲ್ ದ್ವೀಪಗಳು, ನ್ಯಾಸ್ಸಾ, ಸೂಡಾನ್, ಟೋಗೊ

1898 ಕ್ರಿಟ್ (ಬ್ರಿಟಿಷ್ ಅಂಚೆ ಕಚೇರಿಗಳು), ಮೊರಾಕೊ (ಬ್ರಿಟಿಷ್ ಅಂಚೆ ಕಚೇರಿಗಳು) ಪೋರ್ಚುಗೀಸ್ ಆಫ್ರಿಕ, ಥೆಸ್ಸಾಲಿ ಜರ್ಮನ್ ನ್ಯೂ ಗಿನಿ

1899 ಬೊಯಾಕ, ಕ್ಯಾರೊಲಿನ್ ದ್ವೀಪಗಳು, ದಹೊಮೆ, ಈಜಿಪ್ಟ್ (ಫ್ರೆಂಚ್ ಅಂಚೆ ಕಚೇರಿಗಳು), ಗುಆಮ್, ಕಿಷನ್‌ಘರ್. ಮೊರಾಕೊ (ಜರ್ಮನ್ ಅಂಚೆ ಕಚೇರಿಗಳು), ಕ್ಯೂಬ

1900 ಕ್ರಿಟ್, ಚೀನಾ (ಜಪಾನಿನ ಅಂಚೆ ಕಚೇರಿಗಳು), ಕೊರಿಯ (ಜಪಾನಿನ ಅಂಚೆ ಕಚೇರಿಗಳು), ಕ್ರಿಟ್ (ಇಟಲಿಯ ಅಂಚೆ ಕಚೇರಿಗಳು), ಫೆಡರೇಟೆಡ್ ಮಲಯ ರಾಜ್ಯಗಳು, ಜರ್ಮನ್ ಸಮೋಆ, ಕಿಯಾಟ್ ಶ್ಚೋವ್, ಮಾರಿಯಾನೆ ದ್ವೀಪಗಳು, ಉತ್ತರ ನೈಜೀರಿಯ, ಟರ್ಕ್ಸ್ ಮತ್ತು ಕೈಕೊಸ್ ದ್ವೀಪಗಳು

1901 ಮಗದಲೆನ, ಪಾಪುಆ (ಬಿ.ಎನ್.ಜಿ.) ದಕ್ಷಿಣ ನೈಜೀರಿಯ, ಕೇಮನ್ ದ್ವೀಪಗಳು, ಸಿರೇನಿಕ

1902 ಕ್ರಿಟ್ (ಫ್ರೆಂಚ್ ಅಂಚೆ ಕಚೇರಿಗಳು), ಫ್ರೆಂಚ್ ಸೊಮಾಲಿ ಕೋಸ್ಟ್, ನಿಯೂ, ಪೆನ್ರಿನ್ ದ್ವೀಪಗಳು, ಸ್ಪಾನಿಷ್ ಗಿನಿ

1903 ಐಟುಟಾಕಿ, ಬ್ರಿಟಿಷ್ ಸೊಮಾಲಿಲ್ಯಾಂಡ್, ಕ್ರಿಟ್ (ಆಸ್ಟ್ರೇಲಿಯದ ಅಂಚೆ ಕಚೇರಿಗಳು), ಪೂರ್ವ ಆಫ್ರಿಕ ಮತ್ತು ಉಗಾಂಡ, ಎಲೊಬೆ, ಅನ್ನೊಬೊನ್ ಮತ್ತು ಕೊರಿಸ್ಕೊ, ಸೊಮಾಲಿಯ, ಮೊರಾಕೊ (ಸ್ಪಾನಿಷ್ ಅಂಚೆ ಕಚೇರಿಗಳು), ಸೇಂಟ್ ಕಿಟ್ಸ್ ನೆವಿಸ್, ಸೆನೆಗಾಂಬಿಯ ಮತ್ತು ನೈಗರ್

1904 ಜೈಪುರ್, ಪನಾಮ ಕೆನಾಲ್ ಜೋನ್

1905 ರಯೊ ಡಿ ಓರೊ

1906 ಬ್ರೂನಿ, ಮಾಲ್ಡೀವ್ಸ್, ಮಾರಿಟೇನಿಯ, ಮೊಹೆಲಿ, ಅಪ್ಪರ್ ಸೆನೆಗಲ್ ಮತ್ತು ನೈಗರ್

1907 ಬ್ರಿಟಿಷ್ ಸಾಲೊಮನ್ ದ್ವೀಪಗಳು, ಮಿಡಲ್ ಕಾಂಗೊ

1908 ನ್ಯೂ ಹೆಬ್ರಿಡ್ಸ್

1910 ಟ್ರೆಂಗ್ಗನು, ಟ್ರಿಪೋಲಿಟೇನಿಯ, ಯೂನಿಯನ್ ಆಫ್ ಸೌತ್ ಆಫ್ರಿಕ

1911 ಗಿಲ್ಬರ್ಟ್ ಮತ್ತು ಎಲ್ಲಿಸ್ ದ್ವೀಪಗಳು, ಕೆಲಂಟನ್, ಟಿಬೆಟ್ (ಚೀನಾದ ಅಂಚೆ ಕಚೇರಿಗಳು)

1912 ಕೆಡಾ, ಲೀಖ್‌ಟೆನ್‌ಸ್ಟೀನ್, ಟಿಬೆಟ್ ಮತ್ತು ಏಜಿಯನ್ ದ್ವೀಪಗಳು

1913 ಆಲ್ಬೇನಿಯ. ಆಸ್ಟ್ರೇಲಿಯ, ಆರ್‌ಬಾ, ಟ್ರಿನಿಡಾಡ್, ಟೊಬ್ಯಾಗೊ

1914 ನ್ಯೂ ಗಿನಿ, ನೈಜೀರಿಯ

1916 ಕೇಪ್ ಜೂಬಿ, ನೌರು, ಜಾಬಾಂಗಿ-ಚಾರಿ, ರುಆಂಡ-ಉರುಂಡಿ, ಸೌದಿ ಅರೇಬಿಯ

1918 ಜೆಕೊಸ್ಲೊವಾಕಿಯ, ಎಸ್ಟೋನಿಯ, ಫಿನ್‌ಯಾಂಡ್, ಲಾಟ್‌ವಿಯಾ, ಇರಾಕ್, ಲಿಥುಯೇನಿಯ, ಪ್ಯಾಲೆಸ್‌ಟೈನ್, ಉಕ್ರೇನ್ ಯುಗೊಸ್ಲಾವಿಯ

1919 ಬೆಟುಮ್, ಜಾರ್ಜಿಯ, ಷಾಂಘೈ (ಅಮೆರಿಕದ ಅಂಚೆ ಕಚೇರಿಗಳು), ಸಿರಿಯ

1920 ಮಧ್ಯ ಲಿಥುಯೇನಿಯ, ಡಾಂಜಿಂಗ್, ಆರ್ಮೇನಿಯ, ಸೈಲೆಸಿಯ, ಇಂಗರ್-ಮ್ಯಾನ್ ಲ್ಯಾಂಡ್, ಜೋರ್ಡಾನ್, ಮೆಮೆಲ್, ಸಾರ್, ಅಪ್ಪರ್ ಓಲ್ಟಾ, ವಾಲೀಸ್ ಮತ್ತು ಫುಟುನಾ ದ್ವೀಪಗಳು

1921 ಬರ್ವಾನಿ, ನೈಗರ್, ಟೋಗೊ

1922 ಆಸೆನ್‌ಷನ್, ಬಾರ್ಬುಡ,ಐರ್ಲೆಂಡ್, ಛಾಡ್

1923 ಕುವೇಟ್, ಲೀಗ್ ಆಫ್ ನೇಷನ್ಸ್, ಟ್ರಾನ್ಸ್‌ಕಕಾಸಿಯನ್ ಫೆಡರೇಷನ್

1924 ಆಲ್ಜೀರಿಯ, ಲೆಬನಾನ್, ಮಂಗೋಲಿಯ ದಕ್ಷಿಣ ರೊಡೇಷಿಯ, ಸ್ಪಾನಿಷ್ ಸಹಾರ

1925 ಅಲೂವಿಟನ್, ಜ್ಯೂಬಲ್ಯಾಂಡ್, ಉತ್ತರ ರ್‍ಹೊಡೇಶಿಯ

1926 ಉತ್ತರ ಮಂಗೋಲಿಯ (ತನ್ನುತೊವ), ಯೆಮೆನ್

1928 ಅಂದೊರ್‍ರಾ

1929 ವ್ಯಾಟಿಕನ್ ಸಿಟಿ

1931 ಮೊರ್‍ವಿ

1932 ಇನಿನಿ, ಮಂಚೂರಿಯ

1933 ಬಹೆರಿನ್, ಬಸುಟೊಲ್ಯಾಂಡ್

1935 ಬಿಜಾವರ್

1937 ಏಡೆನ್, ಬರ್ಮ

1938 ಗ್ರೀನ್‌ಲ್ಯಾಂಡ್, ಹೆಟಿ, ಇಟಾಲಿಯನ್ ಈಸ್ಟ್ ಆಫ್ರಿಕ

1939 ಇಡರ್, ಸ್ಲೊವಾಕಿಯ

1940 ಫರೊ ದ್ವೀಪಗಳು, ಪೆಟ್‌ಕಾರಿನ್ ದ್ವೀಪಗಳು

1941 ವಾನಲ್ ದ್ವೀಪಗಳು, ಕ್ರೊಟಿಯ, ಇಫ್ನಿ

1942 ಜಸ್‌ದಾನ್, ಷಿಹರ್ ಮತ್ತು ಮುಕುಲ್ಲ

1944 ಕ್ಯಾಂಪಿಯೊನ್, ಫಾಕ್‌ಲ್ಯಾಂಡ್ ಐಲೆಂಡ್ ಡಿಪೆಂಡೆನ್ಸೀಸ್, ಮಸ್ಕಟ್ ಸ್ಲೊವೆನಿಯ

1945 ವೆನಿಜಿಯ ಗಿಯುಲಿಯ ಮತ್ತು ಇಸ್ಟ್ರಿಯ, ಫಾರ್ಮೊಸ, ಇಂಡೋನೇಷ್ಯ ಗಣರಾಜ್ಯ, ವಿಯೆಟ್–ನಾವ್

1946 ಫೆಜನ್, ಚೀನಾ (ಪೀಪಲ್ಸ್, ರಿಪಬ್ಲಿಕ್) ಉತ್ತರ ವಿಯೆಟ್ನಾಮ್, ದಕ್ಷಿಣ ವಿಯೆಟ್ ನಾವ್

1947 ನಾರ್ಫೋಕ್ ಐಲೆಂಡ್, ಪಾಕಿಸ್ತಾನ್, ಟ್ರಿಯೆಸ್ಟ್

1948 ಭಾವಲ್ಪುರ್, ಇಸ್ರೇಲ್, ಮಲಕ್ಕ, ಪೆನಾಂಗ್, ಪೆರ್ಲಿಸ್, ಮ್ಯಕ್ವೊ ದ್ವೀಪಗಳು, ಟೊಕೆಲಾವ್ ದ್ವೀಪಗಳು, ಪಶ್ಚಿಮ ಬರ್ಲಿನ್

1949 ರಾಜಾಸ್ತಾನ್, ಪೂರ್ವ ಜರ್ಮನಿ, ಪಶ್ಚಿಮ ಜರ್ಮನಿ

1950 ಕೊಮೊರೊ ದ್ವೀಪಗಳು, ನೆದರ್ಲೆಂಡ್ಸ್, ನ್ಯೂಗಿನಿ

1951 ಕಾಂಬೋಡಿಯ, ಗಲಪಗೋಸ್ ದ್ವೀಪಗಳು, ಲಾವೋಸ್, [illegible] ವಿಶ್ವಸಂಸ್ಥೆ

1952 ಪಾಪುಅ ಮತ್ತು ನ್ಯೂ ಗಿ[illegible], ಟ್ರಿಸ್ಟಾನ್ ದ[illegible] ಕನ್ಹ

1954 ರ್‍ಹೊಡೇಶಿಯ ಮತ್ತು ನ್ಯಾಸಾಲ್ಯಾಂಡ್

1956 ಟ್ಯುನೀಸಿಯ

1957 ಕ್ವಟಾರ್, ಟೊಗೊ (ಅಟಾನಮಸ್ ರಿಪ[illegible]ಬ್ಲಿಕ್)

1958 ಕ್ರಿಸ್‌ಮಸ್ ದ್ವೀಪಗಳು, ಮಲಗಾಸೆ ಗಣರಾಜ್ಯ

1959 ಅಪ್ಪರ್ ಓಲ್ಟಾ ಗಣರಾಜ್ಯ, ಗಿನಿ (ಗಣರಾಜ್ಯ), ಸೆಂಟ್ರಲ್ ಆಫ್ರಿಕನ್ ರಿಪಬ್ಲಿಕ್, ಕಾಂಗೊ ಗಣರಾಜ್ಯ, ಐವರಿ ಕೋಸ್ಟ್ ಗಣರಾಜ್ಯ

1960 ಕಾಂಗೊ, ಕ್ಯಾಮರೂನ್ಸ್, ರಯೊಮುನಿ, ದಹೋಮೆ ಗಣರಾಜ್ಯ, ಮಾಲಿ, ಮಾರಿಟೇನಿಯ

1961 ಟ್ರೂಸಿಯಲ್ ಸ್ಟೇಟ್ಸ್

1962 ಭೂತಾನ್, ಬುರುಂಡಿ, ರ್ವಂಡ, ವೆಸ್ಟರ್ನ್ ನ್ಯೂ ಗಿನಿ

1963 ಮಲೇಷಿಯ, ಸೌತ್ ಅರೇಬಿಯನ್ ಫೆಡರೇಷನ್, ದುಬಾಯ್, ಕೀನ್ಯ, ಷಾರ್ಜ ಆ್ಯಂಡ್ ಡಿಪೆಂಡೆನ್ಸೀಸ್

1964 ಪೂರ್ವ ಆಫ್ರಿಕ, ಅಜ್ಮಾನ್, ಫ್ಯೂಜೇರ, ಅಬುಧಾಬಿ, ರಾಸ್-ಅಲ್-ಖೈಮ, ಜಾಂಬಿಯ, ಮಲಾವಿ

1966 ಮನಾಮ, ಬಹರಿನ್

1967 ಆಂಗ್ವಿಲ್ಲಾ




Printed at Decent Offset, A-73, Naraina Ind. Area, Phase I, New Delhi-110028